ತಿಮ್ಮಪ್ಪದಾಸ ವಿರಚಿತ

# ಧ್ರುವಚರಿತ್ರೆ

(ಸಾಂಗತ್ಯ ಕಾವ್ಯ)

ಪ್ರಧಾನ ಸಂಪಾದಕ : ಪ್ರೊ॥ ಎಂ. ವಿ. ಸೀತಾರಾಮಯ್ಯ

ಸಂಪಾದಕ

ಡಾ॥ ಎನ್. ಎಸ್. ಲಕ್ಷ್ಮೀನಾರಾಯಣಭಟ್ಟ

ಬಿ. ಎಂ. ಶ್ರೀ ಸ್ಮಾರಕ ಪ್ರತಿಷ್ಠಾನ
ನಂ. ೫೪, ೩ನೆಯ ಅಡ್ಡಬೀದಿ
ಗವಿಪುರಂ ವಿಸ್ತರಣ
ಬೆಂಗಳೂರು-೫೬೦ ೦೧೯

೧೯೮೩

DHRUVA CHARITRE, A Narrative Poem in **Sangatya** metre in the classical **Mahakavya** tradition by Thimmappa Dasa (19th Century), edited by Dr. N S. Lakshminarayana Bhatta, Reader in Kannada, Bangalore University. Published by B. M. Sri Memorial Foundation, 54, III Cross, Gavipuram Extension, Bangalore-560 019. Demy 8 Vo.

Published with the Financial Assistance from the Government of India, Department of Education and Culture

**Price . Rs. 15-00**



Printed by
ASHWATH PRINTERS
443, 1st Main Road,
44th Cross, 8th Block,
Jayanagar, Bangalore-560 082

# ಮೊದಲ ಮಾತು

ಶಿಲಾಶಾಸನಗಳು, ನಾಣ್ಯಗಳು, ಮಹಾಸ್ತಿಗಲ್ಲು—ವೀರಗಲ್ಲುಗಳು ಮತ್ತು ತಾಡವೋಲೆ ಭೂರ್ಜಪತ್ರ ಮತ್ತು ಕಾಗದದ ಮೇಲೆ ಬರೆದ ಪ್ರಾಚೀನ ಹಸ್ತಪ್ರತಿಗಳ ಬಖೈರುಗಳು, ಕಡತಗಳು, ಮುಂತಾದವು ದೇಶದ ಅಮೂಲ್ಯವಾದ ಸಾಂಸ್ಕೃತಿಕ ಆಸ್ತಿ; ದೇಶದ ರಾಜಕೀಯ, ಸಾಮಾಜಿಕ ಮತ್ತು ಸಾಂಸ್ಕೃತಿಕ ಇತಿಹಾಸ ರಚನೆಯಲ್ಲಿ ಇವುಗಳ ಪಾತ್ರ ಹಿರಿದು. ಇವುಗಳ ಸಂರಕ್ಷಣೆ ಸರ್ಕಾರದ ಮತ್ತು ಎಲ್ಲ ಜನರ ಪವಿತ್ರ ಕರ್ತವ್ಯ.

ಹಸ್ತಪ್ರತಿಗಳಲ್ಲಿ ಸಾಹಿತ್ಯ ಕೃತಿಗಳಲ್ಲದೆ. ವೈದ್ಯ, ಜ್ಯೋತಿಷ್ಯ, ಅಶ್ವಶಾಸ್ತ್ರ, ಗಜಶಾಸ್ತ್ರ, ಪಶುವೈದ್ಯ, ಮುಂತಾದ ಶಾಸ್ತ್ರವಿಚಾರಗಳೂ ಲಿಖಿತವಾಗಿರುತ್ತವೆ. ಈ ಶಾಸ್ತ್ರಗಳಲ್ಲಿ ನಿಪುಣರಾದವರು ಅನೇಕ ಸಂದರ್ಭಗಳಲ್ಲಿ ಅವುಗಳನ್ನು ಕಾವ್ಯ ರಚನೆಯ ಧಾಟಿಯಲ್ಲಿಯೇ ಬರೆದಿರುವುದು ಒಂದು ವೈಶಿಷ್ಟ್ಯ. ಆದ್ದರಿಂದ ಸಾಹಿತ್ಯ ಮತ್ತು ಸಾಂಸ್ಕೃತಿಕ ದೃಷ್ಟಿಯಿಂದ ಎಲ್ಲ ಹಸ್ತಪ್ರತಿಗಳೂ ಸಂಗ್ರಹಣವಾಗಬೇಕಾದವು, ೧೯೧೧ ರಷ್ಟು ಹಿಂದೆಯೇ ದಿವಂಗತ ಬಿ, ಎಂ. ಶ್ರೀಯವರು ಧಾರವಾಡದಲ್ಲಿ 'ಕನ್ನಡ ಮಾತು ತಲೆಯೆತ್ತುವ ಬಗೆ' ಎಂಬ ತಮ್ಮ ಹೊಸಗನ್ನಡ ಯುಗಪ್ರವರ್ತಕ ಭಾಷಣದಲ್ಲಿ "ದೇಶದಲ್ಲಿ ಹುಳುತಿಂದು ಹೋಗದೆ ಉಳಿದಿರುವ ಗ್ರಂಥಗಳನ್ನೆಲ್ಲಾ ಶೇಖರಿಸಿ ಒಂದನ್ನೂ ಬಿಡದಂತೆ ಅಚ್ಚು ಹಾಕುವುದು" ಎಂದು ಘೋಷಿಸಿದ್ದರು. ಅದಕ್ಕೂ ಮೊದಲೇ ಬಿ. ಎಲ್. ರೈಸ್ ಸಾಹೇಬರೂ, ಆರ್. ನರಸಿಂಹಾಚಾರ್ಯರೂ ಹಸ್ತಪ್ರತಿ ಸಂಗ್ರಹಕಾರ್ಯವನ್ನು ಪ್ರಾಕ್ತನವಸ್ತ್ವನ್ವೇಷಣ ಕಾರ್ಯದ ಅಂಗವಾಗಿ ನಡೆಸಿಕೊಂಡು ಬಂದರು, ಹಸ್ತಪ್ರತಿಗಳ ಸಂಗ್ರಹಣ ಕಾರ್ಯದಷ್ಟೇ ಮುಖ್ಯವಾದ ಕಾರ್ಯ ಅವುಗಳನ್ನು ಬೆಳಕಿಗೆ ತರುವುದು. ಈ ಕಾರ್ಯವನ್ನು ರೈಸ್ ಅವರು Bibliotheca Carnatica ದ (ಕರ್ನಾಟಕದ ಕಥಾವಳಿ) ಮೂಲಕ ಮಾಡಿ ಕನ್ನಡ ಭಾಷೆ ಮತ್ತು ಸಾಹಿತ್ಯಗಳ ಏಳಿಗೆಗೆ ಹೆದ್ದಾರಿಯನ್ನು ನಿರ್ಮಾಣ ಮಾಡಿದರು, ಮೈಸೂರು ವಿಶ್ವವಿದ್ಯಾನಿಲಯದ ವ್ಯಾಪ್ತಿಗೆ ಸೇರಿದಂತೆ ಆ ಕಾಲದಲ್ಲಿ ಮೈಸೂರಿನ ಓರಿಯಂಟಲ್ ಲೈಬ್ರರಿ ಜನ್ಮ ತಳೆಯಿತು. ಅದರಲ್ಲಿ ಅಮೂಲ್ಯವಾದ ಕನ್ನಡ ಮತ್ತು ಸಂಸ್ಕೃತದ ಹಸ್ತಪ್ರತಿಗಳು ಶೇಖರವಾದುವು. ಮೈಸೂರು ವಿಶ್ವವಿದ್ಯಾನಿಲಯವು ಕನ್ನಡ ಅಧ್ಯಯನ ಸಂಸ್ಥೆಯನ್ನು ಸ್ಥಾಪಿಸಿದ ಮೇಲೆ ಕನ್ನಡ ಭಾಷೆಯ ಹಸ್ತಪ್ರತಿಗಳೆಲ್ಲವೂ ಅಲ್ಲಿಗೆ ಸ್ಥಳಾಂತರಗೊಂಡು

ಅಲ್ಲಿ ಕನ್ನಡ ಹಸ್ತಪ್ರತಿಗಳ ಭಂಡಾರವೂ ಅವುಗಳ ಪ್ರಕಟನ ಕಾರ್ಯವೂ ನಿರಂತರವಾಗಿ ಸಾಗಿ ಬರುತ್ತಿರುವುದು ಸಂತೋಷದ, ಶ್ಲಾಘ್ಯವಾದ, ವಿಚಾರ. ಇತರ ವಿಶ್ವವಿದ್ಯಾಲಯಗಳು ಈ ಸಂಸ್ಕೃತಿಸಂಗೋಪನ ಕಾರ್ಯವನ್ನು ಕೈಗೊಂಡು ನಡೆಸುತ್ತಿವೆ. ಈ ಮಹತ್ವದ ಕಾರ್ಯವನ್ನು ಬಿ, ಎಂ ಶ್ರೀ ಪ್ರತಿಷ್ಠಾನ ಸದ್ಯಕ್ಕೆ ತನ್ನ ಪ್ರಧಾನ ಕರ್ತವ್ಯ ಕಾರ್ಯವಾಗಿ ಕೈಗೆತ್ತಿಕೊಂಡಿದೆ.

ಈ ಮಹತ್ವದ ಕಾರ್ಯವು ಒಬ್ಬಿಬ್ಬರು ಅಥವಾ ಒಂದೆರಡು ಸಂಸ್ಥೆಗಳು ಮಾಡಿ ಮುಗಿಯುವಂಥದಲ್ಲ, ಆಗಬೇಕಾದ ಕಾರ್ಯ ಅಪಾರವಾಗಿದೆ. ಸಹಸ್ರ ಸಂಖ್ಯೆಯಲ್ಲಿ ಹಸ್ತಪ್ರತಿಗಳು ಇನ್ನೂ ನಾಡಿನ ಮೂಲೆ ಮೂಲೆಗಳಲ್ಲಿ ಮನೆತನದ ಆಸ್ತಿಯಾಗಿ ಕತ್ತಲಲ್ಲಿ ಕೊಳೆಯುತ್ತ ಹುಳುತುಹೋಗುವ ಸ್ಥಿತಿಯಲ್ಲಿ ಬಿದ್ದಿವೆ. ಇವುಗಳ ಸಂಗ್ರಹಣ ಕಾರ್ಯ ಅತ್ಯಗತ್ಯವಾಗಿ ತ್ವರಿತವಾಗಿ ಆಗಬೇಕಾಗಿದೆ ಈ ಕಾರ್ಯದ ಮಹತ್ವವನ್ನು ಕಂಡುಕೊಂಡು ಕೇಂದ್ರ ಸರ್ಕಾರವು ಹಸ್ತಪ್ರತಿಗಳ ಸಂಗ್ರಹಣ ಮತ್ತು ಪ್ರಕಟನ ಕಾರ್ಯಗಳ ಯೋಜನೆಯನ್ನು ರೂಪಿಸಿ, ಅದರಂತೆ ಸ್ವಯಂಯೋಜಿತ ಸಂಸ್ಥೆಗಳಿಗೆ ಧನಸಹಾಯ ಮಾಡಲು ಮುಂದೆ ಬಂದಿದೆ ಕೇಂದ್ರ ಸರ್ಕಾರವು ನೀಡಿದ ಧನಸಹಾಯದಿಂದ ಈ ವರ್ಷ ಪ್ರತಿಷ್ಠಾನ ಮೂರು ನಾಲ್ಕು ಹಸ್ತಪ್ರತಿಗಳನ್ನು ಪ್ರಕಟಿಸಲು ಸಾಧ್ಯವಾಗಿದೆ. ಈ ಉದಾರ ಸಹಾಯಕ್ಕಾಗಿ ಪ್ರತಿಷ್ಠಾನ ಕೇಂದ್ರಸರ್ಕಾರಕ್ಕೆ ಕೃತಜ್ಞವಾಗಿದೆ. ೧೯೮೨–೮೩ ನೆಯ ಸಾಲಿಗೆ ಕೇಂದ್ರಸರ್ಕಾರದ ಧನಸಹಾಯ ಯೋಜನೆಯ ಅನ್ವಯ ಪ್ರಕಟವಾಗುತ್ತಿರುವ ಗ್ರಂಥಗಳಲ್ಲಿ ತಿಮ್ಮಪ್ಪದಾಸರ 'ಧ್ರುವಚರಿತ್ರೆ'ಯೂ ಸೇರಿದೆ.

ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ವಿಭಾಗದಲ್ಲಿ ರೀಡರ್ ಆಗಿರುವ ಡಾ॥ ಎನ್. ಎಸ್ ಲಕ್ಷ್ಮೀನಾರಾಯಣಭಟ್ಟರು ಈ ಕೃತಿಯನ್ನು ಸಂಪಾದನೆ ಮಾಡಿಕೊಟ್ಟು ಉಪಕಾರ ಮಾಡಿರುತ್ತಾರೆ. ಅವರಿಗೆ ಪ್ರತಿಷ್ಠಾನದ ವಂದನೆಗಳು ಸಲ್ಲುತ್ತವೆ.

ಬೆಂಗಳೂರು-೧೯
ಜುಲೈ ೧, ೧೯೮೩

ನಿಟ್ಟೂರು ಶ್ರೀನಿವಾಸ ರಾವ್
ಅಧ್ಯಕ್ಷ

# ಎರಡು ಮಾತು

ತಿಮ್ಮಪ್ಪದಾಸರ ಕೃತಿಗಳನ್ನೂ ಒಳಗೊಂಡಂತೆ ಅನೇಕ ತಾಡವೋಲೆ ಹಸ್ತಪ್ರತಿಗಳು ನಮ್ಮ ಮನೆತನದ ಆಸ್ತಿಯಾಗಿ, ನನ್ನ ಅಣ್ಣಂದಿರು ದಿ॥ ಎಂ ವಿ. ವೆಂಕಟರಮಣಯ್ಯನವರು ಮತ್ತು ಇತರ ವಂಶಜರ ಕೃಪೆಯಿಂದ ೧೯೬೫ ರ ಸುಮಾರಿನಲ್ಲಿ ನನ್ನ ಕೈಸೇರಿದವು. ಆ ಸಂಗ್ರಹಕ್ಕೇ ಸೇರಿದ್ದ 'ಧ್ರುವಚರಿತ್ರೆ'ಯ ಹಸ್ತಪ್ರತಿ ಅದಕ್ಕೂ ಮೊದಲೇ ನನ್ನ ದೊಡ್ಡಪ್ಪನವರು (ತಿಮ್ಮಪ್ಪದಾಸರ ಮೊಮ್ಮಕ್ಕಳು) ಪ್ರತಿ ನವರಾತ್ರಿಯ ಕಾಲದಲ್ಲಿ ಸರಸ್ವತೀ ಪೂಜೆಗೆ ಬೇಕೆಂದು ಕೇಳಿದಾಗ ಅವರು ಹಿಂದೆ ಮುಂದೆ ನೋಡದೆ ನನಗೆ ಕೊಟ್ಟುಬಿಟ್ಟರು. ಆಶ್ಚರ್ಯದ ಸಂಗತಿ ಎಂದರೆ, ಅದನ್ನು ನಾನು ಪೂಜಾ ವಸ್ತುವಾಗಿ ಇಟ್ಟುಕೊಂಡೆನೇ ಹೊರತು ಅದರ ಒಳಗೆ ಏನಿದೆ ಎನ್ನುವ ಕುತೂಹಲ ನನ್ನನ್ನು ಕಾಡಲೇ ಇಲ್ಲ! ಏದೋ ಒಮ್ಮೆ ಒಂದೆರಡು ಗರಿಗಳನ್ನು ಹಿಡಿದಾಡಿಸಿ ನೋಡಿದಾಗ ಸಾಂಗತ್ಯದ ಕೃತಿ ಎಂದು ಕಂಡುಕೊಂಡೆ, ಆದರೆ ಹೆಚ್ಚಿನ ಪರಿಶೀಲನೆಗೆ ಹೋಗಲಿಲ್ಲ ೧೯೭೮ ರ ಸುಮಾರಿನಲ್ಲಿ ನನ್ನ ಪ್ರಿಯ ವಿದ್ಯಾರ್ಥಿಗಳ ನೆರವಿನಿಂದ ಅಸ್ತವ್ಯಸ್ತವಾಗಿದ್ದ, ಬಿಡಿಬಿಡಿಯಾಗಿ ಚೆದರಿಹೋಗಿದ್ದ, ಓಲೆಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಕಟ್ಟುಗಳಾಗಿ ವಿಂಗಡಿಸಿ ಜೋಪಾನಗೊಳಿಸಿದ್ದಾಯಿತು. ಈ ಕಟ್ಟುಗಳಲ್ಲಿನ ಪೂಜಾವಿಧಾನ ಕೀರ್ತನೆಗಳನ್ನು ಸಂಗ್ರಹದ ಇನ್ನೊಂದು ಕಾಗದದ ಹಸ್ತಪ್ರತಿಯನ್ನು ಬಳಸಿಕೊಂಡು 'ಅರ್ಚನ' ಎಂಬ ಹೆಸರಿನಿಂದ ಸಂಪಾದನೆ ಮಾಡಿದ ಕೃತಿಯನ್ನು ಬೆಂಗಳೂರು ವಿಶ್ವವಿದ್ಯಾಲಯದ ನೆರವಿನಿಂದ ಪ್ರಕಟಿಸಲಾಯಿತು. ಪೂಜಾವಿಧಾನದ ಕೀರ್ತನೆಗಳಲ್ಲಿ ಎಲ್ಲಿಯೂ ಕವಿಯ ಹೆಸರಿಲ್ಲ. ಅವುಗಳ ಹಾಗೂ ದಾಸರ ಇತರ ಕೃತಿಗಳ ಕರ್ತೃತ್ವವನ್ನು ನಿಶ್ಚಯಿಸುವಲ್ಲಿ ಧ್ರುವಚರಿತ್ರೆ ಒಂದು ಪ್ರಬಲವಾದ ಬಾಹ್ಯಪ್ರಮಾಣವನ್ನು ಒದಗಿಸಿತು. ಕವಿಯ ಹುಟ್ಟೂರಾದ ಚಿಕ್ಕನಾಯಕನಹಳ್ಳಿ, ಕವಿಯ ಹೆಸರು, ಕವಿಗೆ ಪ್ರಿಯವಾದ ದೇವತಾಮುದ್ರಿಕೆ, ಇವು ಈ ಕೃತಿಯಲ್ಲಿ ಮೊತ್ತಮೊದಲಿಗೆ ಒಂದೇ ಕಡೆ ಕಂಡುಬಂದುವು.

ಧ್ರುವಚರಿತ್ರೆ ಈ ಕಾರಣಕ್ಕಾಗಿ ಮಾತ್ರವಲ್ಲದೆ ಬೇರೆಯ ಕಾರಣಗಳಿಗಾಗಿಯೂ ಪ್ರಮುಖವಾದ ಕೃತಿ. ಕನ್ನಡದಲ್ಲಿ ಸಾಂಗತ್ಯ ಕಾವ್ಯಗಳ ಪರಂಪರೆ ಪ್ರಾಚೀನವಾದುದು. ಈ ಪರಂಪರೆಯಲ್ಲಿ ಧ್ರುವಚರಿತ್ರೆಗೆ ಒಂದು ವಿಶಿಷ್ಟ ಸ್ಥಾನವಿದೆ. ಧ್ರುವನ ಕಥೆ ಹೇಳುವ ಸಣ್ಣ ಪ್ರಮಾಣದ ಕೃತಿಗಳು ಕೆಲವಿವೆ. ಆದರೆ, ಮಹಾಕಾವ್ಯ ಸಂಪ್ರದಾಯದಲ್ಲಿ ಹೇಳಬೇಕೆಂದು ಹೊರಟ ದೀರ್ಘ ಕಾವ್ಯ ಇದೊಂದೇ.

ತಿಮ್ಮಪ್ಪದಾಸರ ಕೃತಿ ಸಂಗ್ರಹ ಪ್ರತಿಷ್ಠಾನಕ್ಕೆ ಸೇರುವುದಕ್ಕೆ ಬಲು ಹಿಂದೆಯೇ, ಸು. ೧೯೭೦ರಲ್ಲಿಯೇ, ಈ ಕೃತಿಯ ಸಂಪಾದನ ಕಾರ್ಯವನ್ನು ಪ್ರೊ|| ಎಸ್. ಎಸ್. ಲಕ್ಷ್ಮೀನಾರಾಯಣ ಭಟ್ಟರಿಗೆ ಒಪ್ಪಿಸಿದೆ. ಧ್ರುವಚರಿತ್ರೆಯನ್ನು ಅವರು ಆಸ್ಥೆಯಿಂದ ಹಲವು ಬಾರಿ ಪರಿಶೀಲಿಸಿದ್ದಾರೆ, ತನ್ಮಯರಾಗಿ ಅಧ್ಯಯನ ಮಾಡಿದ್ದಾರೆ. ತೌಲನಿಕ ದೃಷ್ಟಿಯಿಂದ ಅದರ ಬೆಲೆ ಕಟ್ಟಿದ್ದಾರೆ. ಸಂಪಾದನ ಕಾರ್ಯವನ್ನು ಪ್ರೀತಿಯಿಂದ ಅಚ್ಚುಕಟ್ಟಾಗಿ ನೆರವೇರಿಸಿ ಕೊಟ್ಟಿದ್ದಾರೆ. ಅವರಿಗೆ ಪ್ರತಿಷ್ಠಾನ ಕೃತಜ್ಞವಾಗಿದೆ.

'ಅಶ್ವಥ್ ಪ್ರಿಂಟರ್ಸ್' ಮುದ್ರಣಾಲಯದ ಶ್ರೀ ಎಂ. ದಿವಾಕರ್ ಅವರು ಸದಭಿರುಚಿಯ ಮುದ್ರಣಕಾರರು, ಶ್ರದ್ಧೆಯಿಂದ ಮುದ್ರಣಕಾರ್ಯ ಮಾಡಿಕೊಟ್ಟಿದ್ದಾರೆ. ಅವರಿಗೆ ನಮ್ಮ ವಂದನೆಗಳು.

**ಎಂ. ವಿ. ಸೀತಾರಾಮಯ್ಯ**
ಸಂಸ್ಥಾಪಕ ಕಾರ್ಯದರ್ಶಿ ಮತ್ತು
ಅಧ್ಯಯನ ನಿರ್ದೇಶಕ

ಬೆಂಗಳೂರು–೧೯
೨೨–೧೧–೧೯೮೩

# ಮುನ್ನುಡಿ

ಕವಿ ತಿಮ್ಮಪ್ಪದಾಸರು ಹದಿನೇಟನೆಯ ಶತಮಾನದ ಉತ್ತರಾರ್ಧ ಮತ್ತು ಹತ್ತೊಂತ್ತುಬರ ಪೂರ್ವಾರ್ಧದಲ್ಲಿ ಬಾಳಿಹೋದವರು. ಅವರ ನಿಜನಾಮ ತಿಮ್ಮಪ್ಪಯ್ಯ ಎಂದು. ತಾವು ರಚಿಸಿರುವ ಕೀರ್ತನೆಗಳಲ್ಲಿ ಅವರು ತಮ್ಮನ್ನು ತಿಂಮದಾಸ, ತರಳ ತಿಂಮದಾಸ ಎಂದು ಕರೆದುಕೊಂಡಿರುವುದೂ ಉಂಟು

ತಿಮ್ಮಪ್ಪದಾಸರು ಸ್ಮಾರ್ತಬ್ರಾಹ್ಮಣ ಕಮ್ಮೆಕುಲದ ಬಬ್ಬೂರುಕಮ್ಮೆ ಎಂಬ ಉಪಪಂಗಡಕ್ಕೆ ಸೇರಿದವರು.[1] ಅವರ ತಂದೆ ನಾರಾಯಣ, ತಾಯಿ ಚೆನ್ನಮ್ಮ. ದಾಸರ ಕೀರ್ತನೆಗಳಲ್ಲಿ ಇವರನ್ನು ನಾರಾಯಣಾರ್ಯ ಮತ್ತು ಚನ್ನಾಂಬ ಎಂದೂ ಕರೆಯಲಾಗಿದೆ. ದಾಸರಿಗೆ ವೆಂಕಟದಾಸಪ್ಪ ಮತ್ತು ಸೀತಾರಾಮ ಎಂಬ ಇಬ್ಬರು ತಮ್ಮಂದಿರು. ವೆಂಕಟದಾಸ ಎಂಬ ಒಬ್ಬ ಸೋದರಮಾವ ಇದ್ದುದೂ ತಿಳಿಯಬರುತ್ತದೆ. ಸೋದರಮಾವನನ್ನು ದಾಸರು ಭಕ್ತಿಯಿಂದ ಸ್ತುತಿಸಿರುವುದೂ ಉಂಟು. ಈ ಸೋದರಮಾವನಿಂದಲೇ ಅವರು ದಾಸದೀಕ್ಷೆ ಪಡೆದದ್ದೆಂಬ ಸೂಚನೆಯಿದೆ.

ತಿಮ್ಮಪ್ಪದಾಸರ ಪತ್ನಿ ವೆಂಕಮ್ಮ, ಹಿರಿಯಮಗ ನಾರಾಯಣ. ತಮ್ಮ ಜೀವಿತ ಕಾಲದಲ್ಲಿಯೇ ಮಹಿಮಾಪುರುಷರೆಂದು ಪ್ರಸಿದ್ಧರಾಗಿದ್ದ ಶ್ರೀ ವಾಸುದೇವಾರ್ಯರೆಂಬ ಯತಿಗಳು ತಿಮ್ಮಪ್ಪದಾಸರಿಗೆ ಉಪದೇಶವಿತ್ತ ಗುರುಗಳು. ನವರಾತ್ರಿಯ ಮಹಾನವಮಿಯ ಉತ್ಸವದ ಸಂದರ್ಭದಲ್ಲಿ ವಾಸುದೇವಾರ್ಯರು ಶ್ರೀರಂಗಪಟ್ಟಣಕ್ಕೆ ಆಗಮಿಸಿದ್ದುದು, ಆ ದಿನ ಒಂದು ವಿಶೇಷ ಘಟನೆ ನಡೆದದ್ದು, ಮುಂದೆ ತಿಮ್ಮಪ್ಪದಾಸರು ಯತಿಗಳಿಂದ ಕಾವೇರೀ ತೀರದಲ್ಲಿ ಉಪದೇಶ ಪಡೆದದ್ದು ಇವೆಲ್ಲ ದಾಸರ ಕೀರ್ತನೆಯೊಂದರಲ್ಲಿ ವಿವರವಾಗಿ ಪ್ರಸ್ತಾಪಿತವಾಗಿವೆ.[2] ಲಿಪಿಕಾರಕೃತ ಪದ್ಯಗಳಲ್ಲಿ

---

1 ಅರ್ಚನ (ಸಂ) · ಎಂ. ವಿ. ಸೀತಾರಾಮಯ್ಯ, ಅನುಬಂಧ ೨, ಪು ೧೬೪.

2 ಎಂ. ವಿ. ಸೀತಾರಾಮಯ್ಯನವರಿಂದ ಸಂಪಾದಿತವಾದ ಅರ್ಚನ ಪುಸ್ತಕದ ಮುನ್ನುಡಿ ಮತ್ತು ಅನುಬಂಧಗಳಲ್ಲಿ ಕವಿಯ ವಿಷಯ ವಿವರವಾಗಿ, ಆಧಾರಯುತವಾಗಿ ಚರ್ಚಿತವಾಗಿದೆ.

ತಿಮ್ಮಪ್ಪದಾಸರನ್ನು 'ವಾಸುದೇವಾರ್ಯರ ಮೊಂಮ', 'ವಾಸುದೇವ ಪಉತ್ರ'ಎಂದು ಕರೆದಿರುವುದನ್ನು ನೋಡಿದರೆ ವಾಸುದೇವಾರ್ಯರು ದಾಸರ ಪಿತಾಮಹರೇ ಆಗಿರ ಬೇಕೆಂದು ಊಹಿಸಲು ಅವಕಾಶವುಂಟು. ವಾಸುದೇವಾರ್ಯರು ಸನ್ಯಾಸಾಶ್ರಮ ಸ್ವೀಕರಿಸಿ, ಮಹಿಮಾವಂತ ಯತಿಗಳೆನಿಸಿ ಬಾಳಿ ಸಮಾಧಿಗೆ ಸಲ್ಲುವ ಸ್ವಲ್ಪ ಪೂರ್ವದಲ್ಲಿ ತಿಮ್ಮಪ್ಪದಾಸರು ಅವರಿಂದ ಉಪದೇಶ ಸ್ವೀಕರಿಸಿದಂತೆ ತೋರುತ್ತದೆ.

ತಿಮ್ಮಪ್ಪದಾಸರ ಮೂಲಸ್ಥಳ ತುಮಕೂರು ಜಿಲ್ಲೆಯ ಚಿಕ್ಕನಾಯಕನಹಳ್ಳಿ. ಆದರೆ ಅವರು ಶ್ರೀರಂಗಪಟ್ಟಣ, ಅರಕಲಗೂಡು ಮತ್ತು ಮೈಸೂರುಗಳಲ್ಲಿಯೂ ಕೆಲಕಾಲ ಇದ್ದರೆಂದು ಭಾವಿಸಲು ಆಧಾರಗಳಿವೆ. ದಾಸರು ಹೀಗೆ ಸ್ಥಳದಿಂದ ಸ್ಥಳಕ್ಕೆ ಅಲೆಯಬೇಕಾಗಿ ಬಂದುದಕ್ಕೆ ಕಾರಣವನ್ನು ಅವರ ಸಂಬಂಧಿಕರಲ್ಲಿ ಪ್ರಚಾರದಲ್ಲಿರುವ ಸ್ಮೃತಿಕಥೆಗಳ ಆಧಾರದಿಂದ ಊಹಿಸಬಹುದು, ಈ ಕಥೆಗಳ ಪ್ರಕಾರ ಬಾಲಕರಾಗಿದ್ದ ಮುಮ್ಮಡಿ ಕೃಷ್ಣರಾಜ ಒಡೆಯರನ್ನು ಗೋಪ್ಯಮಾಡುವುದರಲ್ಲಿ ದಾಸರು ಮಹಾರಾಣಿ ಲಕ್ಷ್ಮಮ್ಮಣ್ಣಿಯವರಿಗೆ ನೆರವಾಗಿದ್ದರು. ಮಹಾರಾಣಿ ಟಿಪ್ಪೂ ಸುಲ್ತಾನನ ಭೀತಿಯಿಂದಾಗಿ ಕೆಲವು ಅಮೂಲ್ಯ ಒಡವೆ ವಸ್ತುಗಳನ್ನು ದಾಸರ ಬಳಿ ನ್ಯಾಸವಾಗಿ ಇರಿಸಿದ್ದರು. ಸುಲ್ತಾನನೋ ಅಥವಾ ವಿಷಯದ ಸುಳಿವು ತಿಳಿದ ಅವನ ಸೈನಿಕರೋ ಅವುಗಳಿಗಾಗಿ ದಾಸರನ್ನು ಪೀಡಿಸಿದರು. ದಾಸರು ತೊಂದರೆ ಸಹಿಸಿದರೇ ಹೊರತು ವಿಷಯ ಹೊರಬಿಡಲಿಲ್ಲ. ರಾಜ್ಯದಲ್ಲಿ ಶಾಂತಿ ಸ್ಥಾಪಿತವಾಗಿ ಮುಮ್ಮಡಿಯವರಿಗೆ ರಾಜ್ಯ ಮರಳಿದ ನಂತರ ದಾಸರು ಅವುಗಳನ್ನು ಸನ್ನಿಧಾನಕ್ಕೆ ತಲಪಿಸಿದರಂತೆ. ಮುಂದೆ ರಾಜವಂಶದವರು ಪಟ್ಟಣದಿಂದ ಮೈಸೂರಿಗೆ ನೆಲೆ ಬದಲಾಯಿಸಿದರು. ಆಗ ತಿಮ್ಮಪ್ಪದಾಸರು ಸ್ವಸ್ಥಳವಾದ ಮತ್ತು ತಮ್ಮ ಗುರು ವಾಸುದೇವಾರ್ಯರ ನೆಲೆಯಾದ ಚಿಕ್ಕನಾಯಕನಹಳ್ಳಿಗೆ ಹೋಗಿರಬೇಕು. ತಾವು ಚಿಕ್ಕವರಾಗಿದ್ದಾಗ ದಾಸರು ಅರಮನೆಗೆ ಮಾಡಿದ್ದ ಸೇವೆಯನ್ನು ನೆನೆದು ಮುಂದೆ ಮುಮ್ಮಡಿಯವರು ಅವರನ್ನು ಮೈಸೂರಿಗೆ ಕರೆಸಿಕೊಂಡು ಅರಮನೆಯ ಆವರಣ ದಲ್ಲಿದ್ದ ತ್ರಿನಯನೇಶ್ವರ ದೇವಸ್ಥಾನದಲ್ಲಿ ಅವರ ಪೂಜಾಮೂರ್ತಿಗಳನ್ನು ಸ್ಥಾಪಿ ಸಲು ಅವಕಾಶಮಾಡಿಕೊಟ್ಟರು. ಪೂಜಾಮೂರ್ತಿಗಳು ಅಲ್ಲಿದ್ದುದಕ್ಕೆ ಶಾಸನ ರೂಪದ ದಾಖಲೆಗಳಿವೆ. ಮುಂದೆ ನಾಲ್ಮಡಿಯವರ ಕಾಲದಲ್ಲಿ ದಾಸರ ವಂಶಸ್ಥರು ಆ ಪೂಜಾಮೂರ್ತಿಗಳನ್ನು ತಮ್ಮ ವಾಸದ ಮನೆಗೆ ತೆಗೆದುಕೊಂಡು ಹೋಗಿ ಮನೆಯ ಪಕ್ಕದಲ್ಲಿ ತಿಮ್ಮಪ್ಪದಾಸರ ಹೆಸರಿನಲ್ಲಿ ಒಂದು ದೇವಸ್ಥಾನವನ್ನೇ ಕಟ್ಟಿಸಿ ಅಲ್ಲಿ ಸ್ಥಾಪಿಸಿದರು.

* * * *

ಸದ್ಯಕ್ಕೆ ತಿಳಿದುಬಂದಿರುವಂತೆ ತಿಮ್ಮಪ್ಪದಾಸರು ಹನ್ನೊಂದು ಕೃತಿಗಳನ್ನು ರಚಿಸಿದ್ದಾರೆ. ಅವು ಹೀಗಿವೆ:

೧. ಪೂಜಾವಿಧಾನ ಕೀರ್ತನೆಗಳು
೨. ಗುರುಸ್ತುತಿಪರ ಕೀರ್ತನೆಗಳು
೩. ಸದ್ಗುರು ಬೋಧಾನುವಾದ ಸುಧೆ (ಕೀರ್ತನೆಗಳು)
೪. ಆತ್ಮನಿವೇದನ ಮುಂತಾದ ಸಂಕೀರ್ಣ ವಿಷಯಕ ಕೀರ್ತನೆಗಳು
೫. ಶ್ರೀಕೃಷ್ಣ ಬಾಲಲೀಲೆ ಮತ್ತು ಅಕ್ರೂರ ಪ್ರಕರಣ (ಕೀರ್ತನೆಗಳು)
೬. ಜೀವ ಕಾಯ ಸಂವಾದ (ವೈರಾಗ್ಯಪರ ಕೀರ್ತನಗಳು ಮತ್ತು ಕಂದಪದ್ಯಗಳು : ಅಸಮಗ್ರ ಕೃತಿ)
೭. ಧ್ರುವ ಚರಿತ್ರೆ (ಸಾಂಗತ್ಯಕಾವ್ಯ)
೮. ಪರಬ್ರಹ್ಮ ಪ್ರಕಾಶಿಕೆ (ವೇದಾಂತ ವಿಷಯಕ ಗ್ರಂಥ. ಗದ್ಯ)
೯. ಭಗವದ್ವಿಲಾಸದಾಟ (ಗದ್ಯ. ಅಸಮಗ್ರ ಗ್ರಂಥ)
೧೦. ಭಾಗವತ ಕೀರ್ತನೆಗಳು
೧೧. ಉದ್ಯೋಗ ಪರ್ವ ಭಾರತ ಕಥೆ(ವಿವಿಧ ಛಂದಸ್ಸಿನ ಪದ್ಯಕೃತಿ.)

ಮೇಲಿನ ಕೃತಿಗಳಲ್ಲಿ ಸದ್ಯಕ್ಕೆ ಪ್ರಕಟವಾಗಿರುವುವು. 'ಅರ್ಚನ' (ಪೂಜಾ ವಿಧಾನ ಕೀರ್ತನೆಗಳು) ಮತ್ತು ಈ 'ಧ್ರುವಚರಿತ್ರೆ' ಮಾತ್ರ*. ಅವರ ಪೂಜಾ ವಿಧಾನ ಕೀರ್ತನೆಗಳಲ್ಲಿ ಎದ್ದು ಕಾಣುವುದು ಭಕ್ತಿಭಾವ ಮತ್ತು ಭಾಗವತ ದೃಷ್ಟಿ. ಧ್ರುವ ಚರಿತ್ರೆಯನ್ನು ಬಿಟ್ಟರೆ ಹೆಚ್ಚಿನವು ಕೀರ್ತನೆಗಳು. ಉದ್ಯೋಗಪರ್ವದ ಭಾರತಕಥೆ ಕಂದ ಷಟ್ಪದಿಗಳಲ್ಲಿ ರಚಿತವಾಗಿದೆ. ಎರಡು ಗ್ರಂಥಗಳು ಗದ್ಯದಲ್ಲಿ ಬರೆದವು ಮತ್ತು ವೇದಾಂತ ವಿಷಯಕವಾದವು. ಧ್ರುವ ಚರಿತ್ರೆಯೊಂದೇ ಕಾವ್ಯ ವಾಗಿ ಉದ್ದೇಶಿಸಿ ಬರೆದ ಕೃತಿ ಎನ್ನಬಹುದು.

ಧ್ರುವಚರಿತ್ರೆ ತಿಮ್ಮಪ್ಪದಾಸರಿಂದ ರಚಿತವಾದ ಒಂದು ಸಮಗ್ರಕಾವ್ಯ. ಈಗ ದೊರೆತಿರುವಂತೆ ಒಟ್ಟು ೨೨ ಸಂಧಿಗಳಿರುವ ಈ ಸಾಂಗತ್ಯಕಾವ್ಯದಲ್ಲಿ ಮಧ್ಯೆ

---

* 'ಶ್ರೀ ಕೃಷ್ಣಬಾಲಲೀಲೆ'ಯನ್ನು ಸಂಪಾದಿಸಿ ಪ್ರಕಟಿಸುವ ಕಾರ್ಯವನ್ನು ಬಿ.ಎಂ.ಶ್ರೀ. ಪ್ರತಿಷ್ಠಾನ ಕೈಗೆತ್ತಿಕೊಂಡಿದೆ.

ಕೆಲವು ಓಲೆಗರಿಗಳು ಒಟ್ಟುಹೋಗಿವೆ. ಈ ಕಾವ್ಯದ ಲಭ್ಯಪ್ರತಿ ಸದ್ಯಕ್ಕೆ ಇದೊಂದೇ ಆಗಿರುವುದರಿಂದ ಬೇರೆ ಪ್ರತಿಗಳು ದೊರೆಯುವವರೆಗೆ ಲೋಪವಾಗಿರುವ ಪಾಠಭಾಗಗಳನ್ನು ಪಡೆಯುವ ಯಾವ ದಾರಿಯೂ ಇಲ್ಲ ಇದನ್ನು ಬಿಟ್ಟರೆ ಕನ್ನಡದಲ್ಲಿ ಅಚ್ಚಾಗಿರುವ ಧ್ರುವಕಥೆ ದೊರೆಯುವುದು ಚಾಟು ವಿಟ್ಠಲನಾಥನ ಕನ್ನಡ ಭಾಗವತದಲ್ಲಿ ಮಾತ್ರ. ಅಲ್ಲಿ ಇತರತಕ್ಕ ವಿಷ್ಣುಭಕ್ತರ ಕಥೆಗಳ ಜೊತೆಯಲ್ಲಿ ಧ್ರುವನ ಕಥೆಯೂ ಬರುತ್ತದೆ ಈ ಕಥೆ ಅಲ್ಲಿ ತಕ್ಕಮಟ್ಟಿಗೆ ವಿಸ್ತಾರವಾಗಿಯೇ ನಿರೂಪಿತವಾಗಿದ್ದರೂ ತಿಮ್ಮಪ್ಪದಾಸರ ಕೃತಿಯಂತೆ ಅದು ತನಗೆ ತಾನೇ ಒಂದು ಪ್ರತ್ಯೇಕವಾದ ಕೃತಿಯಲ್ಲ. ಒಂದು ಕಿರುಕಾವ್ಯಕೃತಿಯ ಪ್ರಮಾಣ ಅದಕ್ಕಿದೆಯಾದರೂ ಅಲ್ಲಿ ಬರುವ ಅನೇಕ ವಿಷ್ಣುಭಕ್ತರ ಕಥಾಮಾಲಿಕೆಯಲ್ಲಿ ಅದು ಒಂದು ಮಣಿ ಮಾತ್ರ. ಹಾಗೆಂದೇ ಕಥೆ ಅಲ್ಲಿ ಭರದಿಂದ ಓಡುತ್ತದೆ. ರಾಜ ರಾಣಿ ಪುರವನ ಕೇರಿಗಳ ವರ್ಣನೆಗಳಿಗೆ ಅಲ್ಲಿ ಅವಕಾಶವಿಲ್ಲ. ತಾನು ಮುಂದೆ ಇನ್ನೂ ಹಲವಾರು ಕಥೆಗಳನ್ನು ಹೇಳಬೇಕಾಗಿರುವುದರ ಅರಿವು ಕವಿಗಿರುವುದರಿಂದ ಕಥೆಯಷ್ಟನ್ನೇ ಸವೇಗವಾಗಿ ಹೇಳಿಕೊಂಡು ಹೋಗಿದ್ದಾನೆ ತಿಮ್ಮಪ್ಪದಾಸರ ಕೃತಿಯು ಪ್ರಮಾಣದಲ್ಲಿ ಅದಕ್ಕಿಂತಲೂ ಹಿರಿದಾದದ್ದು. ಇದು ಇಪ್ಪತ್ತೆರಡು ಅಧ್ಯಾಯಗಳಿಂದ ಕೂಡಿ ಸುಮಾರು ಒಂಬೈನೂರು ಪದ್ಯಗಳವರೆಗೆ ಬೆಳೆದಿದೆ. ಕನ್ನಡ ಭಾಗವತದಲ್ಲಿನ ಧ್ರುವಕಥೆಯಾದರೋ ಐದು ಸಂಧಿಗಳದ್ದಾಗಿದ್ದು ಒಟ್ಟು ಇನ್ನೂರ ಐವತ್ತನಾಲ್ಕು ಪದ್ಯಗಳಿಗೆ ಮುಗಿಯುತ್ತದೆ. ಪದ್ಯಗಳ ಸಂಖ್ಯೆಯನ್ನು ಅಲಕ್ಷಿಸಿದರೂ ತಿಮ್ಮಪ್ಪದಾಸರ ಕೃತಿ ತನ್ನ ಸಾವಧಾನಗತಿಯಿಂದ ವಿವರಗಳ ಪೂರ್ಣತೆಯಿಂದ ಮತ್ತು ಸ್ವತಂತ್ರ ಕೃತಿಗೆ ಸಹಜವಾದ ದೀರ್ಘವರ್ಣನೆಗಳಿಂದ ಕೂಡಿ ಒಂದು ಸಮಗ್ರ ಕೃತಿಯ ಸ್ವರೂಪವನ್ನು ಪಡೆದುಕೊಂಡಿದೆ. ಕನ್ನಡದಲ್ಲಿ ಹೀಗೆ ಇಡಿಯಾಗಿ, ಇಷ್ಟು ದೀರ್ಘವಾಗಿ, ಒಂದು ಪ್ರತ್ಯೇಕ ಕೃತಿಯಾಗಿ ರಚಿತವಾಗಿರುವ ಧ್ರುವಕೃತಿ ಸದ್ಯಕ್ಕೆ ತಿಳಿದಂತೆ ಇದೊಂದೇ ಎಂದು ಹೇಳಬಹುದು.

ಧ್ರುವನ ಕಥೆಯನ್ನೇ ವಸ್ತುವಾಗಿ ಪಡೆದ ಬೇರೆ ಮೂರು ಹಸ್ತಪ್ರತಿಗಳೂ ಇವೆ. ಅವುಗಳೆಲ್ಲ ಪ್ರಮಾಣದಲ್ಲಿ ತೀರ ಚಿಕ್ಕವು ಮತ್ತು ಇನ್ನೂ ಪ್ರಕಟವಾಗದವು ಈ ಮೂರು ಕೃತಿಗಳ ಹಸ್ತಪ್ರತಿಗಳೂ ಮೈಸೂರು ವಿಶ್ವವಿದ್ಯಾನಿಲಯದ ಅಧ್ಯಯನ ಸಂಸ್ಥೆಯ ಹಸ್ತಪ್ರತಿ ಭಂಡಾರದಲ್ಲಿವೆ.

ಇವುಗಳಲ್ಲಿ ಮೊದಲನೆಯದು 'ಧ್ರುವನ ಹುಟ್ಟು' ಎಂದು ಹೆಸರಿಸಲಾಗಿರುವ ಕೆ. ಬಿ. ೧೯೯ನೆಯ ನಂಬರಿನ ಕಾಗದದ ಹಸ್ತಪ್ರತಿ. ಇದನ್ನು ರಚಿಸಿದವರು ಯಾರೆಂದು ತಿಳಿಯದು. ಇದು ಒಟ್ಟು ಇಪ್ಪತ್ತನಾಲ್ಕು ಪುಟಗಳ ಬರೆಹ. ಪ್ರತಿ

ಪುಟದಲ್ಲಿ ಸುಮಾರು ಹದಿನೆಂಟು ಸಾಲುಗಳಿವೆ. ಅಕ್ಷರ ಸ್ಫುಟವಾಗಿದೆ. ಇಡೀ ಕೃತಿ ಬಹುಮಟ್ಟಿಗೆ ಹಾಡುಗಳ ರೂಪದಲ್ಲಿಯೇ ರಚಿತವಾಗಿದೆ. ಹಾಡುಗಳ ನಡುವೆ ಅಲ್ಲಲ್ಲಿ ವಚನ ಎಂದು ಸೂಚಿಸಿ ಒಂದೆರಡು ಸಾಲುಗಳಷ್ಟು ಗದ್ಯವನ್ನು ಬಳಸಲಾಗಿದೆ. ಹಸ್ತಪ್ರತಿಯನ್ನು ಧ್ರುವನ ಹುಟ್ಟು ಎಂಬ ಹೆಸರಿನಿಂದ ಕರೆದಿದ್ದರೂ ಧ್ರುವ ನಾರಾಯಣನನ್ನು ಸಾಕ್ಷಾತ್ಕರಿಸಿಕೊಂಡು ಬಂದದ್ದರವರೆಗಿನ ಕಥೆಯಿದೆ ಉತ್ತಮ ಮತ್ತು ಸುರುಚಿಯರ ಸಾವು, ಕುಬೇರನ ಮೇಲೆ ಧ್ರುವನ ಯುದ್ಧ, ಅವನಿಗೆ ಪರಮಪದ ದೊರೆತದ್ದು ಮೊದಲಾದ ಕಥಾಭಾಗ ಇದರಲ್ಲಿಲ್ಲ ಹಾಡುಗಳಿಗೆ ಒಂದೆರಡು ಕಡೆ (ಶಂಕರಾಭರಣ ಮುಖಾರಿ ಎಂದು) ರಾಗಗಳನ್ನು ತಿಳಿಸಿದೆ. ಮತ್ತೆ ಕೆಲವು ಕಡೆ 'ರಾಗ' ಎಂದು ಮಾತ್ರ ಬರೆದು ರಾಗದ ಹೆಸರು ಬರೆಯಬೇಕಾದ ಜಾಗವನ್ನು ಖಾಲಿಯಾಗಿ ಬಿಟ್ಟಿದೆ. ಒಟ್ಟು ೧೩೮ ನುಡಿಗಳಿದ್ದು ಅವುಗಳನ್ನು ಸಾಲಾಗಿ ಬರೆದುಕೊಂಡು ಹೋಗಲಾಗಿದೆ ಈ ನುಡಿಗಳೆಲ್ಲ ಒಂದೇ ಲಯದಲ್ಲಿಲ್ಲ; ನಡಿಗೆ ಅಲ್ಲಲ್ಲಿ ಬದಲಾಗುತ್ತದೆ. ಕಂದ ಷಟ್ಪದಿಗಳ ಬಳಕೆಯೂ ಇದೆ ಈ ಕೃತಿಯ ಭಾಷೆ, ಮಟ್ಟುಗಳ ವೈವಿಧ್ಯ, ಕಥನಶೈಲಿ ತಿಳಿಯಲು ಒಂದೆರಡು ಚಿಕ್ಕ ಭಾಗಗಳನ್ನು ಇಲ್ಲಿ ಕೊಡಬಹುದು.

ಸುರುಚಿ ಗರ್ಭಿಣಿಯೆಂಬ ವಿಷಯ ರಾಜನಿಗೆ ತಿಳಿದ ಸಂದರ್ಭ

ಅಂದ ಮಾತನು ಕೇಳಿ
ಬಂದಾ ರಾಯನು
ಚಂದದಿಂದರಮನೆಗೆ
ಸಂದೇಹವೇತಕೆ
ಸುರುಚಿಗೆ ಗರ್ಭವಾ
ನಂದ ಕಾಲಗಳಾಗಲಿ

ಧ್ರುವ ಸುರುಚಿಯ ತಿರಸ್ಕಾರದಿಂದ ನೊಂದು ಹೇಳುವ ಮಾತು

ಪಡೆದ ತಂದೆ ಮಹಾವಿಷ್ಣು । ಪಡೆದ ಜನನಿ ಲಕ್ಷ್ಮಿ
ಎನ್ನೊಡಹುಟ್ಟಿದಾತನು ಅಜ ಹುಸಿಯಲ್ಲ । ಈ ಮಾತು ॥
ಕರುಳು ಖಂಡ ಮಲಭಾಂಡಗಳಿರುವ ಈ
ನರರ ತೊಡೆಯ ನಾನೇರುವನಲ್ಲ ।
ತಾಯೆ ಕೇಳೀ ಮಾತು। ನರಹರಿಯ ತೊಡೆಯ ಮೇಲೆ ಕೂರುವೆ
ನಾ ಹೋಗಿ ।
ಎನ್ನೊಡೆಯನ ಪಾದವ ಸೇರಿ ಧನ್ಯನಾಗುವೆ ಸುಬುದಿ ।

ಸುರುಚಿ ಸುನೀತಿಯ ಬಗ್ಗೆ ನಡೆದುಕೊಂಡ ರೀತಿ :

ಕೂಳಿಗೆ ಬಿದ್ದ ಸುನೀತಿ । ಇಷ್ಟು ಮೂಳ ಪೌರುಷ ಬಂದಿತೆನುತಲೆ ।
ತಾಳು ಅವಳಿಗೆ । ತಕ್ಕ ಶಿಕ್ಷೆಯ ಮಾಡದಿಹೆನೇ ॥
ಕೆಟ್ಟ ಸುನೀತಿಯ ಮನೆಯ ದಾಸಿಯು
ಭೃತ್ಯಕೆನುತಲಿ ನಾಳೆ ಬಂದರೆ
ಕುಟ್ಟಿ ಬಾಯ ಮೇಲೆ ಕಳುಹಿರೆಂದಳು

ಎರಡನೆಯ ಕೃತಿ ಧ್ರುವಚರಿತ್ರೆ. ಕೆ ಬಿ, ೪೦೫ ನೆಯ ನಂಬರಿನ ಈ ಹಸ್ತಪ್ರತಿಯಲ್ಲಿ ಎಪ್ಪತ್ತೆರಡು ಪುಟಗಳಿವೆ. ಪ್ರತಿ ಪುಟದಲ್ಲಿ ಇಪ್ಪತ್ತೈದು ಪಂಕ್ತಿಗಳಿವೆ. ಇದೊಂದು ಯಕ್ಷಗಾನಕೃತಿ ಬೇರೆಬೇರೆ ಮಟ್ಟಿನ ಹಾಡುಗಳಿವೆ. ಚೌಪದಿ ಷಟ್ಪದಿಗಳ ಬಳಕೆಯೂ ಇದೆ "ಪರ ಮಹಾಭಾಗವತ ಪೌರಾಣದೊಳಗೆ । ಹರಿಭಕ್ತ ಧ್ರುವನ ಚಾರಿತ್ರವನು ಧರೆಗೆ । ಸೃಜಿಸುವೆನು ಸಂಗ್ರಹಿಸಿ ಯಕ್ಷಗಾನದಲಿ ವ್ರಜಪುರಾಧಿಪ ಲೋಕನಾಥನೊಲವಿನಲಿ" ಎಂದು ಕೃತಿಕಾರ ಹೇಳಿಕೊಂಡಿದ್ದಾನೆ. ಕೃತಿಕಾರ ಯಾರು ಎಂದು ತಿಳಿಯದು.

ಇದೇ ಹೆಸರಿನ ಕೆ. ಬಿ. ೩೫೪ ನೆಯ ನಂಬರಿನ ಇನ್ನೊಂದು ಹಸ್ತಪ್ರತಿ ಇದ್ದು ಅದು ಮೇಲಿನ ಕೃತಿಯ ನಕಲಾಗಿದೆ.

ಮೂರನೆಯ ಹಸ್ತಪ್ರತಿಯ ಹೆಸರೂ ಧ್ರುವಚರಿತ್ರೆ. ಕೆ. ಬಿ. ೧೭೯ ನೆಯ ನಂಬರಿನ ಈ ಹಸ್ತಪ್ರತಿ ಸ್ವತಂತ್ರ ಕೃತಿಯಲ್ಲ; ಚಾಟುವಿಟ್ಠಲನಾಥನ ಕನ್ನಡ ಭಾಗವತದ ಮೊದಲ ೨೬ ಪದ್ಯಗಳ ಒಂದು ನಕಲು ಅಷ್ಟೆ.

* * * *

ಧ್ರುವನ ಕಥೆ ಸಂಸ್ಕೃತದ ವಿಷ್ಣು ಪುರಾಣ ಮತ್ತು ಭಾಗವತಗಳಲ್ಲಿ ಬರುತ್ತದೆ. ತಿಮ್ಮಪ್ಪದಾಸರ ಧ್ರುವ ಚರಿತ್ರೆಗಾಗಲಿ ಅಥವಾ ಕನ್ನಡ ಭಾಗವತಕ್ಕಾಗಲಿ ಸಂಸ್ಕೃತ ಭಾಗವತದ ಧ್ರುವಕಥೆಯೇ ಮೂಲ. ಒಳವಿವರಗಳಲ್ಲಿ ಕೊಂಚ ವ್ಯತ್ಯಾಸ ವಿದ್ದರೂ ಭಾಗವತದಲ್ಲಿನ ಕಥಾವಿನ್ಯಾಸವನ್ನೇ ಇಬ್ಬರೂ ಪೂರ್ಣವಾಗಿ ಅನುಸರಿಸಿದ್ದಾರೆ ಕನ್ನಡ ಭಾಗವತಕಾರನಾದ ಚಾಟುವಿಟ್ಠಲನಾಥ ತಿಮ್ಮಪ್ಪದಾಸರಿಗಿಂತ ಸಾಕಷ್ಟು ಪ್ರಾಚೀನ ದಾಸರು ಅವನ ಕೃತಿಯನ್ನು ನೋಡಿದ್ದಿರಬಹುದೆನ್ನಲು ಒಂದೆರಡು ಸಣ್ಣ ಸೂಚನೆಗಳಿವೆಯಾದರೂ ಅವನಿಂದ ಪ್ರಭಾವಗೊಂಡದ್ದಕ್ಕೆ ಆಧಾರಗಳೇನೂ ಇಲ್ಲ ಚಾಟುವಿಟ್ಠಲನಾಥ ಸಂಸ್ಕೃತ ಮೂಲದಲ್ಲಿ ಇಲ್ಲದ

ಹಲವಾರು ಉಪಮೆಗಳನ್ನು, ಮೂಲಕಥೆಯಿಂದ ಭಿನ್ನವಾದ ಕೆಲವು ಸಣ್ಣ ಘಟನೆಗಳನ್ನು ಕಲ್ಪಿಸಿಕೊಂಡಿದ್ದಾನೆ ಇವುಗಳಲ್ಲಿ ಸ್ವತಂತ್ರವಾಗಿಯೇ ತರಬಹುದಾದ ಒಂದು ಕಲ್ಪಿತಭಾಗ ಹೊರತು ಬೇರೆ ಯಾವುದೂ ದಾಸರಲ್ಲಿ ಕಂಡುಬರುವುದಿಲ್ಲ. ಮಾತ್ರವಲ್ಲ, ಅವನ ಪದಪುಂಜಗಳು, ನುಡಿಕಟ್ಟುಗಳು, ಮಾತಿನ ಧಾಟಿಗಳು ಯಾವುವೂ ಅವರಲ್ಲಿಲ್ಲ. ಅವರ ಮೂಲ ಆಕರ ಒಂದೇ ಅದು ಸಂಸ್ಕೃತ ಭಾಗವತ. ಅಲ್ಲಿ ನಾಲ್ಕನೆಯ ಸ್ಕಂಧದಲ್ಲಿ (೮ನೆಯ ಅಧ್ಯಾಯದಿಂದ ೧೨ರ ಪೂರ್ತಿ) ಐದು ಅಧ್ಯಾಯಗಳ ಇನ್ನೂರ ಅರವತ್ತೈದು ಶ್ಲೋಕಗಳಲ್ಲಿ ನಿರೂಪಿಸಲಾಗಿರುವ ಕಥೆಯನ್ನು ಚಾಟು ವಿಟ್ಠಲನಾಥ ಹೆಚ್ಚು ವಿಸ್ತರಿಸದೆಯೂ, ತಿಮ್ಮಪ್ಪದಾಸರು ವರ್ಣನಾದಿ ವಿವರ ಸಹಿತವಾಗಿಯೂ ಹೇಳಿದ್ದಾರೆ ಅಪ್ರಕಟಿತ ಹಸ್ತಪ್ರತಿಗಳಲ್ಲಿರುವ ಇತರ ಧ್ರುವಕೃತಿಗಳ ಕಥೆ ಮಾತ್ರ ಒಟ್ಟಿನಲ್ಲಿ ಮೂಲದ್ದೇ ಆದರೂ ಧ್ರುವನ ಜನನದವರೆಗಿನ ಭಾಗದಲ್ಲಿ ಮೂಲದಿಂದ ವಿಶೇಷವಾಗಿ ಭಿನ್ನವಾಗಿವೆ.

ಸಂಸ್ಕೃತ ಭಾಗವತದಲ್ಲಿ ಧ್ರುವನ ಕಥೆ

ಸ್ವಾಯಂಭುವ ಮನುವಿಗೆ ಪ್ರಿಯವ್ರತ ಮತ್ತು ಉತ್ತಾನಪಾದರಾಯ ಎಂದು ಇಬ್ಬರು ಮಕ್ಕಳು ಉತ್ತಾನಪಾದರಾಯನಿಗೆ ಸುನೀತಿ ಮತ್ತು ಸುರುಚಿ ಎಂಬ ಇಬ್ಬರು ಪತ್ನಿಯರು ಕಿರಿಯ ಹೆಂಡತಿಯಾದ ಸುರುಚಿಯ ಮೇಲೆ ರಾಜನಿಗೆ ಹೆಚ್ಚಿನ ಪ್ರೀತಿ.

ಸುನೀತಿಗೆ ಧ್ರುವನೆಂಬ ಮಗ, ಸುರುಚಿಗೆ ಉತ್ತಮನೆಂಬ ಮಗ ಹುಟ್ಟಿದರು. ಉತ್ತಾನಪಾದರಾಯ ಒಮ್ಮೆ ಸಿಂಹಾಸನದಲ್ಲಿ ಕುಳಿತು ಉತ್ತಮನನ್ನು ತನ್ನ ತೊಡೆಯ ಮೇಲ ಕೂರಿಸಿಕೊಂಡು ಮುದ್ದಿಸುತ್ತಿದ್ದ. ಆ ಹೊತ್ತಿಗೆ ಬಾಲಕ ಧ್ರುವ ಅಲ್ಲಿಗೆ ಬಂದ ತನ್ನನ್ನೂ ಉತ್ತಮನಂತೆ ತೊಡೆಯ ಮೇಲೆ ಕೂರಿಸಿಕೊಂಡು ಮುದ್ದಿಸಬೇಕೆಂದು ಬಯಸಿದ ರಾಜ ಮಗುವಿನ ಬೇಡಿಕೆಯನ್ನು ನಡೆಸಲಿಲ್ಲ. ಅಲ್ಲಿಯೇ ಇದ್ದ ಸುರುಚಿ ಅಸೂಯೆ, ಗರ್ವಗಳಿಂದ ಮದಿಸಿ ಧ್ರುವನನ್ನು ಹೀಗಳೆದು ಮಾತನಾಡಿದಳು· "ಮಗೂ ನೀನು ರಾಜಪುತ್ರನಿರಬಹುದು, ಆದರೆ ನನ್ನ ಗರ್ಭದಲ್ಲಿ ಹುಟ್ಟಿಬಂದವನಲ್ಲ. ಬೇರೆಯವಳ ಮಗನಾದ ನಿನಗೆ ರಾಜಾಸನವನ್ನೇರಲು ಅರ್ಹತೆ ಎಲ್ಲಿ ? ಪಾಪ, ಚಿಕ್ಕವನಾದ ನಿನಗೆ ಇದು ತಿಳಿಯದು ಆದ್ದರಿಂದಲೇ ದೊರೆಯದ್ದಕ್ಕೆ ವೃಥಾ ಆಸೆಪಡುತ್ತಿರುವೆ ನೀನು ಸಿಂಹಾಸನವನ್ನು ಪಡೆಬೇಕಾದಲ್ಲಿ ನಾರಾಯಣನನ್ನು ಒಲಿಸಿಕೊಂಡು ಅವನ ಅನುಗ್ರಹ ಪಡೆದು ನನ್ನ ಹೊಟ್ಟೆಯಲ್ಲಿ ಹುಟ್ಟಿ ಬಾ" ಎಂದಳು. ಮಲತಾಯಿಯ ಬಿರುನುಡಿ ಕೇಳಿದ ಧ್ರುವ ಕೋಲಿನಿಂದ ಬಡಿದ ಕಾಳೋರಗದಂತೆ ರೋಷಗೊಂಡು ನಿಟ್ಟುಸಿರು ಬಿಡುತ್ತ ತಾಯಿ

ಸುನೀತಿಯು ಬಳಿಗೆ ಬಂದ. ದುಃಖಿಸುವ ಮಗನನ್ನು ಅಪ್ಪಿಕೊಂಡು ಸಮಾಧಾನ ಮಾಡುತ್ತ ಸುನೀತಿ ಹೇಳಿದಳು : "ಮಗೂ, ನಿಮ್ಮ ತಂದೆ ನನ್ನನ್ನು ಹೆಂಡತಿಯೆಂದಾಗಲಿ, ಕಡೆಗೆ ದಾಸಿಯೆಂದಾಗಲಿ ಇಟ್ಟುಕೊಳ್ಳಲು ನಾಚುತ್ತಿದ್ದಾನೆ. ಅಂಥವಳ ಮಗನಾದುದರಿಂದ ಸುರುಚಿ ನಿನಗೆ ಹೇಳಿದ ಮಾತು ನ್ಯಾಯವಾದದ್ದೆ. ಉತ್ತಮನಂತೆ ಸಿಂಹಾಸನವೇರಲು ನೀನು ನಾರಾಯಣನನ್ನೇ ಬೇಡಬೇಕು. ಅವನು ಮಾತ್ರವೇ ನಿನ್ನ ದುಃಖವನ್ನು ಪರಿಹರಿಸಬಲ್ಲ," ತಾಯಿಯ ಮಾತು ಕೇಳಿ ಧ್ರುವ ಹಾಗೆಯೇ ಮಾಡುವೆನೆಂದು ನಗರದಿಂದ ಕಾಡಿಗೆ ಹೊರಟುಬಿಟ್ಟ,

ಇದನ್ನು ತಿಳಿದ ನಾರದರು ಆಶ್ಚರ್ಯಪಟ್ಟು ಧ್ರುವನ ಮಾರ್ಗದಲ್ಲಿ ಎದುರಾಗಿ ಬಂದು ಅವನನ್ನು ಕಂಡರು ನಾರಾಯಣನನ್ನು ಒಲಿಸಿಕೊಳ್ಳುವುದು ಎಂಥೆಂಥ ಯೋಗಿ, ಮುನಿಗಳಿಗೂ ಕಷ್ಟ; ಇನ್ನೂ ಹಸುಳೆಯಾದ ನಿನಗೆ ಸಾಧ್ಯವೆ? ಹಟ ಬಿಟ್ಟು ಮನೆಗೆ ಹಿಂತಿರುಗು ಎಂದು ತಿಳಿಹೇಳಿದರು. ಧ್ರುವ ಒಪ್ಪಲಿಲ್ಲ. ನನ್ನನ್ನು ಮರಳುವಂತೆ ಹೇಳಬೇಡಿ ಬದಲು ದುಸ್ಸಾಧ್ಯನಾದ ನಾರಾಯಣನ ಅನುಗ್ರಹವನ್ನು ಸಾಧಿಸುವ ದಾರಿಯನ್ನು ತಿಳಿಸಿ ಎಂದು ಅವರನ್ನೇ ಬೇಡಿದ. ಬಾಲಕನ ನಿರ್ಧಾರಕ್ಕೆ ನಾರದರು ಮೆಚ್ಚಿದರು ಅವನಿಗೆ ಧ್ಯಾನವಿಧಾನವನ್ನು ಉಪದೇಶಿಸಿ, ಮಧುವನಕ್ಕೆ ಹೋಗಿ ತಪಸ್ಸುಮಾಡಿ ಭಗವಂತನನ್ನು ಒಲಿಸಿಕೊಳ್ಳುವಂತೆ ತಿಳಿಸಿ ನೇರವಾಗಿ ಉತ್ತಾನಪಾದರಾಯನಲ್ಲಿಗೆ ಬಂದರು ಆ ಹೊತ್ತಿಗೆ ರಾಜ ಧ್ರುವನನ್ನು ಅನಾದರಿಸಿದ ತನ್ನ ನಡತೆಗಾಗಿ ಪಶ್ಚಾತ್ತಾಪದಿಂದ ಬೇಯುತ್ತಿದ್ದ ನಾರದರೆದುರು ತನ್ನ ನಡತೆಯನ್ನು ತಾನೇ ಹಳಿದುಕೊಂಡ

ಧ್ರುವ ಮಧುವನಕ್ಕೆ ಬಂದು ತಪಸ್ಸಿಗೆ ನಿಂತ. ಮೊದಲು ದೀರ್ಘ ಕಾಲಕ್ಕೊಮ್ಮೆ ಅಲ್ಪಾಹಾರವನ್ನು ತೆಗೆದುಕೊಳ್ಳುತ್ತ, ಅನಂತರ ಅದನ್ನೂ ಬಿಟ್ಟು ತರಗೆಲೆ, ಒಣಹುಲ್ಲುಗಳನ್ನು ತಿನ್ನುತ್ತ, ಮುಂದೆ ಕೇವಲ ಜಲಾಹಾರ ಸೇವಿಸುತ್ತ, ಕಡೆಗೆ ಶ್ವಾಸವನ್ನೇ ನಿರ್ಬಂಧಿಸಿ ಒಂಟಿಕಾಲಿನಲ್ಲಿ ನಿಂತು ತಪಸ್ಸು ಮಾಡಿದ. ಹುಡುಗ ಚಲಿಸದೆ ನಿಂತು ಧ್ಯಾನಿಸುತ್ತಿದ್ದರೆ ಭೂಮಿ ಆನೆಯ ಮೇಲೆ ಹೊರಿಸಿದ ಹಡಗಿನಂತೆ ಇಕ್ಕೆಲವಲ್ಲಿಯೂ ತೂಗಿತು. ಅವನ ತಪೋಜ್ವಾಲೆಗೆ ಮೂರು ಲೋಕ ಬೆದರಿದವು. ಉಸಿರಾಟವೇ ಕಟ್ಟಿದಂತಾಗಿ ಜೀವರಾಶಿ ತಲ್ಲಣಿಸಿತು. ಎಲ್ಲರೂ ಇಂದ್ರಾದಿ ಲೋಕಪಾಲರನ್ನು ಮುಂದುಮಾಡಿಕೊಂಡು ವಿಷ್ಣುವಿನ ಬಳಿ ತೆರಳಿ ತಮ್ಮ ಅಳಲು ತೋಡಿಕೊಂಡರು. ಅವನು ಅವರಿಗೆ ಅಭಯವಿತ್ತು ಧ್ರುವನನ್ನು ಅನುಗ್ರಹಿಸಲು ಮಧುವನಕ್ಕೆ ಬಂದ

ಮಿಂಚಿನ ಬಳ್ಳಿಯಂತೆ ಜ್ವಲಿಸುತ್ತ ಧ್ರುವನ ಹೃದಯಗೋಚರವಾಗಿದ್ದ ಧ್ಯಾನಮೂರ್ತಿ ಥಟ್ಟನೆ ಮರೆಯಾದಂತಾಯಿತು, ಧ್ರುವ ಕಣ್ಣು ತೆರೆದರೆ ಎದುರಿಗೆ

ತೇಜೋರಾಶಿಯಾದ ಭಗವಂತ ಬೆಳಗುತ್ತಿದ್ದ. ವಿಸ್ಮಯಾನಂದಗಳಿಂದ ತುಂಬಿ ಹೋದ ಬಾಲಕ ಅವನ ಪಾದಗಳ ಮೇಲೆ ದಿಂಡುರುಳಿದ ಸ್ತುತಿಸಬೇಕೆಂಬ ಆಸೆ ಯಿದ್ದರೂ ಹಾಗೆ ಮಾಡಲರಿಯದೆ ನಿಂತ ಮುಗ್ಧಬಾಲಕನ ಗಲ್ಲವನ್ನು ಹರಿ ತನ್ನ ಶಂಖದಿಂದ ಸೋಕಿದೊಡನೆ ಧ್ರುವನ ಅಜ್ಞಾನ ಹರಿದು ಜ್ಞಾನ ಬೆಳಗಿತು; ನಾರಾ ಯಣನ ನಿಜಸ್ವರೂಪದ ಅರಿವು ಹುಟ್ಟಿತು. ಧ್ರುವ ಅವನನ್ನು ಮುಕ್ತಮನಸ್ಸಿ ನಿಂದ ಸ್ತುತಿಸಿದ; ಅವನ ದಿವ್ಯ ಸ್ವರೂಪವನ್ನು ಬಣ್ಣಿಸಿದ. ಹುಡುಗನ ಮನಸ್ಸಿ ನಲ್ಲಿದ್ದ ಕೋರಿಕೆಯನ್ನು ಅರಿತ ಭಗವಂತ ದೀರ್ಘಕಾಲ ರಾಜ್ಯವಾಳಿ ಕಡೆಯಲ್ಲಿ ಪರಮಪದಕ್ಕೆ ಸಲ್ಲುವಂತೆ ಆಶೀರ್ವದಿಸಿ ಮರೆಯಾದ ಲೌಕಿಕ ಆಸೆಯ ಪರಿಣಾಮ ವಾಗಿ ತಾನು ಮತ್ತೆ ಲೋಕದ ನಡುವೆಯೇ ಉಳಿದುದನ್ನು ಕಂಡು ಧ್ರುವನ ಮನಸ್ಸು ಖಿನ್ನವಾಯಿತು ಚಕ್ರವರ್ತಿಯ ಬಳಿ ಹೋಗಿ ಬೊಗಸೆ ಬತ್ತ ಬೇಡಿ ದಂತೆ ಮೋಕ್ಷವನ್ನೇ ಕೊಡಬಲ್ಲ ಮಹಾದೇವನಿಂದ ಕೇವಲ ಸಿಂಹಾಸನ ಪಡೆದು ಬಂದೆನಲ್ಲ ಎಂದು ತನ್ನನ್ನೇ ನಿಂದಿಸಿಕೊಳ್ಳುತ್ತ ಧ್ರುವ ರಾಜ್ಯಕ್ಕೆ ಮರಳಿದ

ಮಗನ ಆಗಮನದ ಸುದ್ದಿ ತಿಳಿದು ಉತ್ತಾನಪಾದರಾಯ ಸಂಭ್ರಮದಿಂದ ತುಂಬಿಹೋದ ಸುನೀತಿಗೆ ಹೋದ ಜೀವ ಮರಳಿದಂತಾಯಿತು. ಊರಿಗೆ ಊರೇ ಅವನನ್ನು ಸಡಗರದಿಂದ ಸ್ವಾಗತಿಸಿತು. ಸ್ವಲ್ಪ ಕಾಲಾನಂತರ ಉತ್ತಾನ ಪಾದರಾಯ ಮಗನಿಗೆ ಸಾಮ್ರಾಜ್ಯವನ್ನಿತ್ತು ತಾನು ತಪಸ್ಸಿಗೆ ತೆರಳಿದ

ಶಿಶುಮಾರನೆಂಬ ಪ್ರಜಾಪತಿಯ ಮಗಳಾದ ಭ್ರಮಿ ಮತ್ತು ವಾಯುವಿನ ಮಗಳಾದ ಇಳಾ ಎಂಬ ಚೆಲುವೆಯರು ಧ್ರುವನ ಕೈಹಿಡಿದರು ಭ್ರಮಿಗೆ ಕಲ್ಪ ಮತ್ತು ವತ್ಸರರೆಂಬ ಇಬ್ಬರು ಮಕ್ಕಳಾದರು. ಇಳಾ ಉತ್ಕಲನೆಂಬ ಮಗನನ್ನೂ ಒಂದು ಹೆಣ್ಣುಮಗುವನ್ನೂ ಪಡೆದಳು. ಸುರುಚಿಯ ಮಗನಾದ ಉತ್ತಮ ಇನ್ನೂ ಅವಿವಾಹಿತನಾಗಿದ್ದ. ಒಮ್ಮೆ ಅವನು ಬೇಟೆಗೆಂದು ಕಾಡಿಗೆ ಹೋಗಿದ್ದಾಗ ಒಬ್ಬ ಯಕ್ಷನಿಂದ ಹತನಾದ ಧೃತಿಗೆಟ್ಟ ಸುರುಚಿ ಮಗನನ್ನು ಹುಡುಕುತ್ತ ಹೋಗಿ ಕಾಡುಗಿಚ್ಚಿಗೆ ಸಿಕ್ಕಿ ಸುಟ್ಟುಹೋದಳು. ತಾಯಿ, ತಮ್ಮಂದಿರ ಸಾವಿನಿಂದ ಉದ್ವಿಗ್ನ ನಾದ ಧ್ರುವ ಯಕ್ಷರಾಜನಾದ ಕುಬೇರನ ಮೇಲೆ ಯುದ್ಧ ಸಾರಿದ ಧ್ರುವನ ಮೇಲೆ ಯಕ್ಷರ ಮಹಾಸೈನ್ಯ ಕವಿಯಿತು ಅವನ ಬಾಣಗಳ ಪಟಿಗೆ ಸಿಕ್ಕಿ ಅದು ಕಳವಳಿಸಿತಾದರೂ ಬಾಲಮೆಟ್ಟಿದ ಹಾವಿನಂತೆ ರೋಷಗೊಂಡು ಪುನಃ ಅವನ ಮೇಲೆ ಎರಗಿತು, ಬಗೆ ಬಗೆ ಅಸ್ತ್ರಗಳ ಮಳೆಗರೆಯಿತು ಬಿರುಮಳೆಯಿಂದ ಮುಸುಕಿದ ಬೆಟ್ಟದಂತೆ ಧ್ರುವ ಆ ಬಾಣವೃಷ್ಟಿಯಲ್ಲಿ ಮರೆಯಾದ. ಉತ್ಸಾಹಿತರಾದ ಯಕ್ಷರು ಗೆಲುವಿನ ಕೇಕೆ ಹಾಕುತ್ತಿರುವಂತೆಯೇ ಮಂಜನ್ನು ಸೀಳಿಕೊಂಡು ಮೂಡುವ ಮಾರ್ತಾಂಡಮಂಡಲದಂತೆ ಮತ್ತೆ ಕಾಣಿಸಿಕೊಂಡು ಅವರ ಸೊಲ್ಲ ಡಗಿಸಿದ

ಕೂಡಲೆ ಯಕ್ಷರು ಮರೆಯಾಗಿ ಮಾಯಾಯುದ್ಧಕ್ಕೆ ತೊಡಗಿದರು. ಘೋರ ಶಬ್ದ ಕಿವಿಯನ್ನು ಮುತ್ತಿತು. ಭಯಂಕರ ಗಾಳಿ ಎದ್ದಿತು. ಮಿಂಚು ಚೆಲ್ಲುವ ಭಯಂಕರ ಮೇಘಗಳು ಆಕಾಶದಲ್ಲಿ ತೇಲಿಬಂದವು. ರಕ್ತಮಾಂಸ, ಮಲಮೂತ್ರಗಳ ಮಳೆ ಸುರಿಯಿತು. ಭಯಂಕರ ಮೃಗ ಸಮೂಹ ಕಾಣಿಸಿಕೊಂಡಿತು. ಮಹರ್ಷಿಗಳು ಧ್ರುವನಿಗೆ ಕಾಣಿಸಿಕೊಂಡು ಈ ಉತ್ಪಾತಗಳಿಂದ ಅವನು ಎದೆಗೆಡಬಾರದೆಂದು ತಿಳಿಸಿ ಜಯವಾಗಲೆಂದು ಹರಸಿದರು. ಧ್ರುವನು ಕೊಂಚವೂ ವಿಚಲಿತನಾಗದೆ ಧನುಸ್ಸಿನಲ್ಲಿ ನಾರಾಯಣಾಸ್ತ್ರವನ್ನು ಸಂಧಾನ ಮಾಡಿ ಹೊಡೆದ ಅದರ ಎದುರಿನಲ್ಲಿ ಯಕ್ಷರ ಮಾಯೆ ಕುಸಿಯಿತು ಧ್ರುವನ ಬಾಣದೇಟುಗಳಿಂದ ಅವರು ಒಂದೇ ಸಮನೆ ನೆಲಕ್ಕೆ ಉರುಳತೊಡಗಿದರು. ಈ ಜೀವಹತ್ಯೆಯನ್ನು ಕಂಡು ನೊಂದು ಧ್ರುವನ ಪಿತಾಮಹನಾದ ಮನುಚಕ್ರವರ್ತಿ ಮಹರ್ಷಿಗಳ ಜೊತೆಯಲ್ಲಿ ಮೊಮ್ಮಗನಿಗೆ ಕಾಣಿಸಿಕೊಂಡು ಈ ವಧೆಯನ್ನು ನಿಲ್ಲಿಸುವಂತೆ ಧ್ರುವನನ್ನು ಕೋರಿದ. ಬಂಧುಗಳ ಸಾವಿನಿಂದ ಉದ್ವಿಗ್ನನಾಗುವುದು ಅವನಂಥ ಜ್ಞಾನಿಗೆ ಸಲ್ಲದೆಂದ. ಪಿತಾಮಹನ ಮಾತಿನಿಂದ ತಾನು ಮಾಡುತ್ತಿರುವುದು ಸರಿಯಲ್ಲವೆನಿಸಿ ಧ್ರುವ ಯುದ್ಧವನ್ನು ನಿಲ್ಲಿಸಿದ, ಆ ಹೊತ್ತಿಗೆ ಕುಬೇರನೂ ಅಲ್ಲಿಗೆ ಬಂದು ಧ್ರುವನನ್ನು ಹರಸಿ ಭಗವಂತನ ಸ್ಮರಣೆ ಅವನ ಪಾಲಿಗೆ ಸಂತತವಾಗಿರಲೆಂಬ ವರವನ್ನಿತ್ತ.

ರಾಜ್ಯಕ್ಕೆ ಮರಳಿದ ಧ್ರುವ ಯಜ್ಞಯಾಗಾದಿಗಳನ್ನು ಮಾಡಿ ಕಡೆಗೆ ಬದರಿಕಾಶ್ರಮಕ್ಕೆ ತೆರಳಿ ತಪಸ್ಸಿಗೆ ನಿಂತ. ಕ್ರಮೇಣ ದೇಹಾಭಿಮಾನವನ್ನೇ ಮರೆತು ಆತ್ಮಾರಾಮಸ್ಥಿತಿಗೆ ಮುಟ್ಟಿದ ಅವನಲ್ಲಿಗೆ ಪರಿಕಿಂಕರರು ದಿವ್ಯ ವಿಮಾನವೊಂದರಲ್ಲಿ ಬಂದರು. ಸೂರ್ಯಚಂದ್ರರಿಂದ ಪ್ರದಕ್ಷಿಣೆಗೊಳ್ಳುವ ಪರಮಪದಕ್ಕೆ ಕೊಂಡೊಯ್ಯಲು ಬಂದ ಆ ವಿಮಾನದಲ್ಲಿ ಕುಳಿತು ಧ್ರುವ ಹೊರಟ. ಕೂಡಲೆ ಅವನಿಗೆ ತನ್ನ ತಾಯಿಯ ನೆನಪಾಯಿತು ಅವಳು ಆಗಲೇ ಬೇರೊಂದು ವಿಮಾನದಲ್ಲಿ ಮುಂದೆ ಸಾಗುತ್ತಿರುವುದನ್ನು ಹರಿಕಿಂಕರರು ಅವನಿಗೆ ತೋರಿಸಿದರು. ದೇವತೆಗಳು ಮುಕ್ತಮನಸ್ಸಿನಿಂದ ಪ್ರಶಂಸೆ ಮಾಡುತ್ತಿರಲು ಗ್ರಹ ಸೂರ್ಯ ಸಪ್ತರ್ಷಿ ಮಂಡಲವೆಲ್ಲವನ್ನೂ ದಾಟಿ ಧ್ರುವ ಪರಮಪದವನ್ನು ನೇರಿದ.

ಮೈತ್ರೇಯ ಋಷಿ ವಿದುರನಿಗೆ ಹೇಳಿದ ಈ ಕಥೆಯನ್ನು ಸೂತಮುನಿಗಳು ಶೌನಕಾದಿ ಮುನಿಗಳಿಗೆ ಹೇಳಿದರೆಂದು ಭಾಗವತ ತಿಳಿಸುತ್ತದೆ.

**ಕನ್ನಡ ಭಾಗವತದ ಧ್ರುವೋಪಾಖ್ಯಾನ**

ಚಾಟು ವಿಟ್ಠಲನಾಥನ ಕನ್ನಡ ಭಾಗವತದಲ್ಲಿನ ಧ್ರುವಕಥೆ ಹೆಚ್ಚೂಕಡಿಮೆ ಮೂಲದ ಸಂಸ್ಕೃತ ಕಥೆಯ ಸೆರಗು ಹಿಡಿದು ನಡೆದ ಅನುವಾದವೆಂದು

ಹೇಳಬಹುದು ಅವನು ಕಥೆಯನ್ನು ಮಾತ್ರವಲ್ಲ, ಅಲ್ಲಿನ ಪದಪುಂಜ, ಅಲಂಕಾರಗಳನ್ನೂ ಸಹ ಅನೇಕ ಕಡೆ ಅನುವಾದಿಸುವುದುಂಟು ಹೀಗೆಂದಾಗ ಕನ್ನಡದ್ದು ಸಂಸ್ಕೃತದ ಮಕ್ಕಿಕಾಮಕ್ಕಿ ಭಾಷಾಂತರವೆಂದೂ ಹೇಳುವಂತಿಲ್ಲ ಸೂಕ್ಷ್ಮವಾಗಿ ಪರಿಶೀಲಿಸಿದಾಗ ಕನ್ನಡ ಭಾಗವತಕಾರ ತನ್ನ ಪ್ರತಿಭಾ ಪ್ರಕಾಶನಕ್ಕೆ ಅಗತ್ಯವಾಗುವಷ್ಟು ಸ್ವಾತಂತ್ರ್ಯವನ್ನು ವಹಿಸಿದ್ದಾನೆ. ಮೂಲದ ಕೆಲವು ವಿವರಗಳನ್ನು, ಉಪಮೆಗಳನ್ನು ಕೈಬಿಟ್ಟಿದ್ದಾನೆ ಅಲ್ಲಿಲ್ಲದ ಎಷ್ಟೋ ಅಂಶಗಳನ್ನು ಸೇರಿಸಿಕೊಂಡಿದ್ದಾನೆ, ಆದರೆ ಈ ಸ್ವಾತಂತ್ರ್ಯ ಎಲ್ಲೂ ಮೂಲದ ಒಟ್ಟು ದೃಷ್ಟಿಗೆ ಅಪೋಹ ತರುವಂಥದಾಗಿಲ್ಲ. ಬದಲಾಗಿ ಅವರ ಆಶಯವನ್ನೇ ಇನ್ನಷ್ಟು ಪೋಷಿಸಿದೆ ಎನ್ನಬೇಕು ಇದಕ್ಕೆ ಒಂದೆರಡು ನಿದರ್ಶನಗಳನ್ನು ಪರಿಶೀಲಿಸಬಹುದು

ಮೂಲದಲ್ಲಿ ಧ್ರುವನ ತಪೋಜ್ವಾಲೆಯಿಂದ ಜೀವರಾಶಿಯೆಲ್ಲ ಗಾಬರಿಗೊಳ್ಳುತ್ತವೆ. ಆಗ ಇಂದ್ರಾದಿ ಲೋಕಪಾಲರೆಲ್ಲ ನಾರಾಯಣನ ಬಳಿ ತೆರಳಿ ತಮ್ಮನ್ನು ಕಾಪಾಡುವಂತೆ ಪ್ರಾರ್ಥಿಸುತ್ತಾರೆ ಅಭಯವಿತ್ತ ನಾರಾಯಣ ಧ್ರುವನನ್ನು ಅನುಗ್ರಹಿಸಲು ಮಧುವನಕ್ಕೆ ತೆರಳುತ್ತಾನೆ.

ಈ ಭಾಗದಲ್ಲಿ ಕನ್ನಡ ಭಾಗವತಕಾರ ಒಂದು ಹೊಸ ಅಂಶವನ್ನು ಕಲ್ಪಿಸಿಕೊಂಡಿದ್ದಾನೆ. ಗಾಬರಿಗೊಂಡ ಮೂರುಲೋಕಗಳೂ ಇಂದ್ರನಲ್ಲಿ ತಮ್ಮ ಸ್ಥಿತಿ ತೋಡಿಕೊಳ್ಳುತ್ತವೆ ಇಂದ್ರ ಅವರಿಗೆ ಅಭಯವಿತ್ತು ಕಳಿಸಿ ಧ್ರುವನ ತಪಸ್ಸನ್ನು ಕೆಡಿಸುವ ಬಗೆಯನ್ನು ಚಿಂತಿಸುತ್ತಾನೆ ಧ್ರುವ ಇನ್ನೂ ಚಿಕ್ಕ ಹುಡುಗ. ಅವನ ಮನಸ್ಸು ಹೆಣ್ಣಿನ ಮೋಹ ವಿಭ್ರಮಗಳಲ್ಲಿ ಸಿಕ್ಕಿಬೀಳುವಂಥದಲ್ಲ, ಅಪ್ಸರೆಯರು ಇಲ್ಲಿ ಉಪಯೋಗಕ್ಕೆ ಬರುವಂತಿಲ್ಲ ಈ ಹುಡುಗನ ಚಿತ್ತಕ್ಕೆ ಕಳವಳ ಕವಿಸಬಹುದಾದ ಬೇರೆ ಏನೇನು ವಿಘ್ನಗಳಿವೆಯೋ ಅವನ್ನೆಲ್ಲ ಮಾಡಿ ಎಂದು ಹೇಳಿ ಇಂದ್ರ ಆ ಕೆಲಸಕ್ಕೆ ತಕ್ಕವರನ್ನು ಅಟ್ಟುತ್ತಾನೆ.

ಕೂಡಲೇ ಮಧುವನದಲ್ಲಿ ಬಿರುಗಾಳಿ ಬೀಸಿತು. ಕೆಂಧೂಳಿ ಮೇಲೆದ್ದಿತು. ಕತ್ತಲೆ ಟಿಕ್ಕನ್ನೆಲ್ಲ ತಬ್ಬಿತು. ಭಯಂಕರ ರಾಕ್ಷಸರು, ಹುಲಿ ಕರಡಿಗಳು ಧ್ರುವನ ಎದುರಿನಲ್ಲಿ ಹಿಂಡುಹಿಂಡಾಗಿ ಕಾಣಿಸಿಕೊಂಡವು. ಧ್ರುವ ಕದಲಲಿಲ್ಲ. ಸೂರ್ಯ ಜ್ವಲಿಸಿ ಉರಿದ. ಯಮ ಕೊರಳಿಗೆ ಪಾಶ ಬೀಸಿದ. ಆದರೂ ಧ್ರುವ ಚಲಿಸಲಿಲ್ಲ. ಬದಲಾಗಿ "ಬಿಸಿಲ ಝಳ ಬೆಳದಿಂಗಳಾದುದು ನಸುಬೆಮರನಾರಿಸಿತು, ಗಾಳಿಯ ಗಸಣೆ ಹರಿದುದು ಪಾಶ ವೈಸರಿಸಿತ್ತು ಕಡಲೇಳು."

ಸೋತರೂ ಇಂದ್ರ ಅವನನ್ನು ಎಬ್ಬಿಸುವ ಪ್ರಯತ್ನ ನಿಲ್ಲಿಸಲಿಲ್ಲ. ಕಾಡು ಕಿಚ್ಚು ಹಬ್ಬಿಸಿದ. ಅದು ಸುತ್ತಲಿಂದ ಮುತ್ತಿಬಂತು. ಆದರೆ ಅದೇ ಗಳಿಗೆ

ಆಕಾಶದ ತುಂಬ ಮುಗಿಲು ಕಾಣಿಸಿಕೊಂಡು ಜೋರು ಮಳೆ ಸುರಿದು ಕಿಚ್ಚು ಶಾಂತವಾಯಿತು.

ಸುನೀತಿ ಕಾಣಿಸಿಕೊಂಡಳು. "ಮಗೂ ರಾಕ್ಷಸರು ನಿನ್ನನ್ನು ತಿನ್ನಲು ಬರುತ್ತಿದ್ದಾರೆ ಮೃಗಗಳು ನಿನ್ನನ್ನು ತಿನ್ನಲು ಬರುತ್ತಿವೆ, ಏಳು ಏಳು. ನೀನಿಲ್ಲದೆ ನಾನಿರಲಾರೆ" ಎಂದು ಕೂಗಿದಳು. ರಾಜ ನನ್ನನ್ನು ಮನೆಯಿಂದ ಹೊರಹಾಕಿದ, ಸುರುಚಿ ನನ್ನನ್ನು ಕಾಡಿಗಟ್ಟಿದಳು. ನಿನ್ನನ್ನು ಹುಡುಕಿಕೊಂಡು ಬಂದೆ ಇಲ್ಲಿ ಈ ಖಳ ಸಮೂಹ ನನ್ನನ್ನು ಕಾಡುತ್ತಿದೆ. ಕಣ್ಣು ತೆರೆ, ನನ್ನನ್ನು ರಕ್ಷಿಸಿಕೊ"ಎಂದು ಆರ್ತಳಾಗಿ ಕೂಗಿದಳು. ಧ್ರುವನ ಧ್ಯಾನ ಕೊಂಚ ಅಲುಗಿತು. ಕಣ್ಣು ತೆರೆದ. ತಾಯಿಯಿಲ್ಲ! ಕೂಡಲೆ ದೈತ್ಯಾಳಿ ಮೃಗಸಮೂಹ ಕಾಣಿಸಿಕೊಂಡು ಮೇಲೆ ಹಾಯ್ದುವು. ಧ್ರುವ ಎಷ್ಟೂ ಭಯಪಡದೆ ಪುನಃ ಕಣ್ಣು ಮುಚ್ಚಿದ, ಹರಿಧ್ಯಾನದಲ್ಲಿ ಮುಳುಗಿಹೋದ. ಇಲ್ಲಿಗೆ ಇಂದ್ರ ಸೋತ, ದಿಕ್ಕು ತೋಚದೆ ಹರಿಯ ಹತ್ತಿರಕ್ಕೆ ಓಡಿದ!

ಈ ಹೊಸ ಕಲ್ಪನೆ ನಿಜವಾಗಿ ಚೆನ್ನಾಗಿದೆ ಎಂಥೆಂಥ ಋಷಿಗಳನ್ನೆಲ್ಲ ಅಪ್ಸರೆಯರ ಮಾರಕಾಸ್ತ್ರ ಬಳಸಿ ಬಗ್ಗಿಸಿದ್ದ ಇಂದ್ರನಿಗೆ ಧ್ರುವ ಎಳೆಯ ಹುಡುಗನಾದದ್ದೇ ಒಂದು ಸಮಸ್ಯೆಯಾಗುವುದು ನಗು ತರಿಸುತ್ತದೆ. ಕಾಮಕ್ಕೆ ಸಿಗದವನನ್ನು ಭಯದಿಂದ ಮಣಿಸಲು ಸುರಪರಿವಾರ ಹೂಡುವ ಸಂಚುಗಳು ಬಾಲಕನನ್ನು ಕಂಗಾಲಾಗಿ ಮಾಡುವಂಥವು. ಈ ಅಡ್ಡಿಗಳನ್ನೆಲ್ಲ ಪ್ರಕೃತಿ ಪ್ರತಿವ್ಯಾಪಾರದಿಂದ ನಿವಾರಿಸುವುದು ಸರಿಯೆ. ಆದರೆ ತಾಯಿಯ ದೀನಮುಖವನ್ನು ಕಂಡೊಡನೆ ಮಗು ಕಳವಳಗೊಂಡು ಕಣ್ಣು ತೆರೆಯುವುದು ಮಾತ್ರ ತೀರ ಮನಕರಗಿಸುವಂತಿದೆ. ಇಂಥ ದೃಶ್ಯ ಕಲ್ಪನೆ ಕನ್ನಡ ಭಾಗವತಕಾರನ ಕಾವ್ಯಸಾಮರ್ಥ್ಯಕ್ಕೆ ಒಂದು ಹಿರಿಯ ಸಾಕ್ಷಿ ಎನ್ನಬಹುದು. ಕಡೆಯಲ್ಲಿ ಧ್ರುವ ಪರಮಪದಕ್ಕೆ ಹೊರಡುವಾಗ ತನ್ನ ತಾಯಿಯ ಜೊತೆಗೆ ಮಾತ್ರ ಬಂದೇನು ಎನ್ನುವ ಭಾಗ ಕೂಡ ಕನ್ನಡ ಕವಿಯದೇ ಆಗಿದ್ದು ತುಂಬ ಮಾನವೀಯವಾಗಿದೆ.

ಈ ಕಲ್ಪನಾಶಕ್ತಿ ಕೇವಲ ಪ್ರಸಂಗಗಳ ಕಲ್ಪನೆಗಷ್ಟೇ ಸೀಮಿತವಾಗಿಲ್ಲ. ಕೆಲವು ಸಲ ಮೂಲದಲ್ಲಿಲ್ಲದ ವರ್ಣನೆಗಳು ಕನ್ನಡ ಭಾಗವತದಲ್ಲಿ ಸಾಲುಗಟ್ಟಿ ಬರುತ್ತವೆ. ಕುಬೇರನ ಸೈನ್ಯ ಧ್ರುವನಮೇಲೆ ಎರಗಿದಾಗ,

ಪಾಲುಗಡಲೊಳಗದ್ದ ಮಂದರ
ಶೈಲವೋ ಕಲ್ಪಾಂತವಹ್ನಿಯ
ಮೇಲೆ ಮುಸುಕಿದ ಕಮಲಜಾಂಡ ಕಟಾಹಮಂಡಲವೊ

ಎಂಬಂತೆ ತೋರಿದಂತೆ. ಕಡೆಗೆ ಧ್ರುವನ ಅಸ್ತ್ರಗಳ ಏಟನ್ನು ತಾಳಲಾರದೆ ಕುಬೇರಬಲ "ತೆಗೆದು ಹಾಯ್ದುದು ಮೃತ್ಯುವಿನ ತಾಳಿಗೆಗೆ ತುತ್ತುಗಳಾದೆವೈ ಹಾಯೆನುತ ನಿಜಪುರಕ"

ಯಕ್ಷ ಸೈನ್ಯ ಮಾಡಿದ ಮಾಯಾ ಯುದ್ಧದ ವರ್ಣನೆ ಮೂಲದಲ್ಲಿರುವುದೇ ಆಗಿದ್ದರೂ ಕನ್ನಡ ಭಾಗವತದಲ್ಲಿ ಅದು ಇನ್ನೂ ಪ್ರತಾಪವತ್ತಾಗಿ ವರ್ಣಿತ ವಾಗಿದೆ.

ದೆಸೆ ದೆಸೆಗೆ ಕೆಂದೂಳಿ ಗಗನವ
ಮುಸುಕಿದುದು ಘನ ಮೇಘವಭ್ರದ
ಬಸುರನಾವರಿಸಿದವು ಸಿಡಿಲುಗಳಿರದೆ ಮಾಯೆಗಳು
ಮಿಸುಪ ಮಿಂಚಿನ ಬಳ್ಳಿಗಳು ಲಂ
ಬಿಸಿದುವಾಕ್ಷಣದೊಳಗೆ ಕರೆದುದು
ಕಿಸುಕುಳದ ಮಳೆ ಧರೆಗೆ ಕತ್ತಲೆಯಾಯ್ತು ನಿಮಿಷದಲಿ

ಅದ್ದವೋಲಾಯ್ತಿಳೆ ರಸಾತಳ
ಕಿದ್ದಿರಿಕೆಯಲಿ ಮೇರುವೋಲಡ
ಬಿದ್ದವೋಲಾಯ್ತೇನನೆಂಬೆನು ಮಾನವೇಶ್ವರನ
ಕದ್ದುದಸುರರ ಮಾಯೆ ಕುಳಿಯಲಿ
ಬಿದ್ದುದೋ ಮಾನವ ಮಹಾಹವ
ಭದ್ರಗಜವೆಂದೊರಲುತಿರ್ದುದು ಸಕಲ ಜನನಿವಹ

ಗಿರಿಗಳುದಿರಿದವಭ್ರದಿಂದಿಳೆ –
ಗುರು ಕಬಂಧಾನೀಕ ಬಿದ್ದುದು
ಕರಡಿ ಪುಲಿಪಂದಿಗಳು ಕಾಡಾನೆಗಳು ಕವಿತರಲು
ಉರಿವ ಕಂಗಳ ವಿಷಮ ಧೂಮಾಂ
ಕುರದ ವದನದ ದೆಸೆಗಳಲಿ ಹೂಂ
ಕರಿಸುವುರಗಾನೀಕ ಕವಿದುದು ನೃಪನ ಸಂಮುಖಕೆ

ಪರಿಘಮುಸಲ ಮುಸುಂಡಿಗಳು ಮು
ದ್ಗರ ಮಹಾ ಪಾಷಾಣ ಶಸ್ತ್ರೋ
ತ್ಕರದ ಮಳೆ ಮೋಹರಿಸಿತೆಣ್ದೆಸೆಗಂಬುರಾಶಿಗಳು
ಧರಣಿಯನು ಮುಳುಗಿಸಿದವತಿ ಭೀ

ಕರ ಮಹೋರ್ಮಿ ಘಜಾವ ಗೂಢಾಂ
ಬರ ಗಿರಿಪ್ರ್ರಮ ದನೆಯದೇಕಾರ್ಣವದ ರಭಸವಲಿ

ಬಿಗಿಲಯದ ಹೆದೆಯಿಂದ ಹೀಗೆ ಪದಗಳು ಪಟಪಟನೆ ಪುಟಿದೇಳುವುದು, ಚಿತ್ರಗಳಾಗಿ ಅರಳಿ ಸುರಿಯುವುದು ರಸಾವೇಶದ ಕ್ರಿಯೆ ಎನ್ನುವುದರಲ್ಲಿ ಸಂದೇಹವೇ ಇಲ್ಲ. ಮುಂದೆ ಧ್ರುವ ಲೋಕದ ನಶ್ವರತೆಯನ್ನು ಪರಿಭಾವಿಸಿ, ಭೋಗವನ್ನೆಲ್ಲ ತ್ಯಜಿಸಿ ತಪಸ್ಸಿಗೆಂದು ಬದರಿಕಾಶ್ರಮಕ್ಕೆ ಹೋಗುತ್ತಾನೆ. ಅದನ್ನು ಕವಿ,

ವಿದುರ ಕೇಳೆಡಗಾಲ ಹುಡಿಯನು
ಬಿದಿರಿ ಬಿಸಡುವವೋಲು ಸಕಲವ
ಒದೆದು ನಡೆದನು ಕುಳಿಯ ದಾಂಟಿದ ಭದ್ರಗಜದಂತೆ

ಎಂದು ಹೇಳುವಲ್ಲಾಗಲಿ ಅಥವಾ,

ಕಾಯ ನಾನೆಂದೆಂಬಡಿದು ಪರ
ಕೀಯ ರೇತೋಜನಿತ ಕಾಲನ
ಬಾಯಿಗೆತ್ತಿದ ತುತ್ತು ಸುಸ್ಥಿರವಲ್ಲ ಶುಚಿಯಲ್ಲ
ನಾಯಿ ನರಿ ಹುಲಿ ಕಾಗೆ ಹದ್ದಿನ
ಬೀಯವಿದಕುವಯೋಗ್ಯವಾದವು.

ಎಂದು ವರ್ಣಿಸುವಲ್ಲಾಗಲಿ ಕವಿ ಮೂಲದಲ್ಲಿ ಇಲ್ಲದುದನ್ನು ಹೇಳುತ್ತಿದ್ದಾನೆ. ಜೊತೆಗೆ ಅರ್ಥೋಚಿತವಾದ ಉಪಮೆಗಳನ್ನೂ ಸಹ ತಂದಿದ್ದಾನೆ.

ಇಷ್ಟು ಸಮರ್ಥನಾದ ಕವಿ ಮೂಲದಲ್ಲಿನ ಅನೇಕ ಸೊಗಸಾದ ಚಿತ್ರಗಳನ್ನು ಕೈಬಿಡುವುದು ಮಾತ್ರ ಆಶ್ಚರ್ಯಕರವಾದದ್ದು. ಅವುಗಳ ಸೊಬಗನ್ನು ಗ್ರಹಿಸುವಲ್ಲಿ ಕವಿ ಸೋತನೆ. ಅಥವಾ ತಿಳಿದೂ ಅಲಕ್ಷಿಸಿದನೆ ? ಮೂಲದ ಉಪಮೆಗಳನ್ನು ತೆಗೆದುಕೊಳ್ಳುವುದರಲ್ಲಿ ಅವನಿಗೆ ಹಿಂಜರಿಕೆಯೇನಿಲ್ಲ. "ತೇಪಿ ಚಾಮುಪಮೃಷ್ಯಂತಃ ಪಾದಸ್ಪರ್ಶಮಿವೋರಗಾ " ಎನ್ನುವಲ್ಲಿರುವ ಸಂಕ್ಷಿಪ್ತ ಶಬ್ದಚಿತ್ರವನ್ನು ಸಹ "ಬಾಲವನು ಕಡಿದುರಗನಿಕರದವೋಲು ಕವಿದುದು ಕೂಡೆ ಯಕ್ಷೇಶ್ವರನ ಪರಿವಾರ" ಎಂದು ಕೊಂಚ ಉತ್ತಮವಾಗಿಯೇ ಅನುವಾದಿಸಿಕೊಡುವ ಕೌಶಲ ಅವನದು. ಹಾಗಿದ್ದೂ ಕೆಲವು ಸೊಗಸಾದ, ಅರ್ಥಪೂರ್ಣವಾದ ಚಿತ್ರಗಳು ಕನ್ನಡ ಭಾಗವತದಲ್ಲಿ ಕಳಚಿಕೊಂಡಿವೆ, ಧ್ರುವನು ಕುಬೇರನ ಸೈನ್ಯದ ಮೇಲೆ ನಾರಾಯಣಾಸ್ತ್ರ ಪ್ರಯೋಗಿಸಿದಾಗಿನ ಪರಿಣಾಮಗಳನ್ನು ಸಂಸ್ಕೃತ ಭಾಗವತ ವರ್ಣಿಸುವ ರೀತಿ ಇದು :

ಸಂಧೀಯಮಾನ ಏತಸ್ಮಿನ್ ಮಾಯಾಗುಹ್ಯಕ ನಿರ್ಮಿತಾಃ
ಕ್ಷಿಪ್ರಂ ವಿನೇಶುರ್ವಿದುರ ಕ್ಲೇಶಾ ಜ್ಞಾನೋದಯೇ ಯಥಾ

ತಸ್ಯಾರ್ಷಮಸ್ತ್ರಂ ಧನುಷಿ ಪ್ರಯುಂಜತಃ
ಸುವರ್ಣಪುಂಖಾ ಕಲಹಂಸ ವಾಸಸಃ
ವಿನಿಸ್ಸೃತಾ ಆವಿವಿಶುರ್ದ್ವಿಷದ್ಬಲಂ
ಯಥಾವನಂ ಭೀಮರವಾಃ ಶಿಖಂಡಿನಃ

ತೈಸ್ತಿಗ್ಮಧಾರೈಃ ಪ್ರಧನೇ ಶಿಲೀಮುಖೈ
ರಿತಸ್ತತಃ ಪುಣ್ಯಜನಾ ಉಪದ್ರುತಾಃ
ತಮಭ್ಯಧಾವನ್ ಕುಪಿತಾ ಉದಾಯುಧಾಃ
ಸುಪರ್ಣಮುನ್ನದ್ಧ ಫಣಾ ಇವಾಹಯಃ

[ಧ್ರುವ ನಾರಾಯಣಾಸ್ತ್ರವನ್ನು ಹೂಡಿದ. ಜ್ಞಾನೋದಯವಾದೊಡನೆ ಸಂಸಾರ ದುಃಖಗಳೆಲ್ಲ ಹರಿದುಹೋಗುವಂತೆ ಯಕ್ಷ ನಿರ್ಮಿತವಾದ ಮಾಯೆಗಳೆಲ್ಲ ನಾಶವಾಗಿ ಹೋದುವು ಅಸ್ತ್ರವನ್ನು ಪ್ರಯೋಗಿಸುತ್ತಿರುವಂತೆ ಚಿನ್ನದ ಅಲಗು ಗಳಿಂದ ಥಳಥಳಿಸುವ, ಹಂಸದ ಗರಿಗಳಿಂದ ಕೂಡಿದ ಬಾಣಗಳು ಹೊರಚಿಮ್ಮಿ ದುವು. ಭಯಂಕರವಾಗಿ ಕೂಗುತ್ತ ಕಾಡನ್ನು ಹಾಯುವ ನವಿಲಿನಂತೆ ಆ ಬಾಣಗಳು ಶತ್ರುಸೈನ್ಯವನ್ನು ಹೊಕ್ಕವು. ಹರಿತವಾದ ಮೊನೆಯ ಆ ಬಾಣಗಳಿಂದ ಏಟು ತಿಂದ ಯಕ್ಷರೆಲ್ಲ ರೋಷಭರಿತರಾಗಿ ಆಯುಧ ಹಿಡಿದು, ಹೆಡೆಯೆತ್ತಿದ ಹಾವುಗಳು ಗರುಡನನ್ನು ತರುಬಿಕೊಂಡು ಹೋಗುವಂತೆ ಎಲ್ಲ ಕಡೆಯಿಂದ ಧ್ರುವನ ಮೇಲೆ ಎರಗಿದರು.]

ಮೇಲಿನ ಮೂರು ಶ್ಲೋಕಗಳಲ್ಲಿ ಮೂರು ಉಪಮೆಗಳು ಬಂದಿವೆ. ನಾರಾ ಯಣಾಸ್ತ್ರದ ದರ್ಶನದಿಂದ ಯಕ್ಷಮಾಯೆ ಕುಸಿಯುವುದನ್ನು ಜ್ಞಾನದರ್ಶನ ದಿಂದ ಸಂಸಾರಮಾಯೆ ಕಳಚಿಕೊಳ್ಳುವ ಉಪಮೆಯಿಂದ ನಿದರ್ಶಿಸಿರುವುದು ಧ್ವನಿ ಪೂರ್ಣವಾಗಿದೆ. ಈ ಅಸ್ತ್ರಪ್ರಯೋಗದ ನಂತರ ಯುದ್ಧ ನಿಂತು ಧ್ರುವ ಬದರಿ ಕಾಶ್ರಮಕ್ಕೆ ತೆರಳುವುದನ್ನೂ, ಜ್ಞಾನಲಾಭದಿಂದ ಸಂಸಾರದ ಮಾಯೆ ಹರಿಯು ವುದನ್ನೂ ಗಮನಿಸಿದಾಗ ಈ ಉಪಮೆಯಲ್ಲಿ ಸೊಗಸಾದ ವಸ್ತುಧ್ವನಿಯಿದೆ ಎನ್ನಿಸುತ್ತದೆ. ಭಯಂಕರ ಕೂಗಿನ ನವಿಲಿನ ಚಿತ್ರದಲ್ಲಿ ನಾರಾಯಣಾಸ್ತ್ರದ ಮನೋಹರ ದೃಶ್ಯ ಮತ್ತು ಅದರ ಭಯಂಕರ ಸ್ವರೂಪ ಎರಡೂ ವ್ಯಕ್ತವಾಗು ತ್ತವೆ. ಪೆಟ್ಟುತಿಂದ ಸರ್ಪ ಛಲರೋಷಗಳಿಗೆ ಅತ್ಯುಚಿತ ಹೋಲಿಕೆಯಾಗಿರು ವಂತೆಯೇ ಅದು ಗರುಡನ ಮೇಲೆ ಹಾಯುತ್ತಿರುವುದರಿಂದ ಅದರ ಸೋಲು ಶತ ಸ್ಸಿದ್ಧವೆನ್ನುವುದೂ ತಿಳಿಯುತ್ತದೆ. ನಾರಾಯಣ, ಗರುಡ, ಜ್ಞಾನ – ಈ ಪ್ರತಿಮೆ ಗಳು ಧ್ರುವನ ಸಂಬಂಧದಲ್ಲಿಯೂ ಮಾಯೆ, ಅರಣ್ಯ, ಕಾಳೋರಗಗಳು ಯಕ್ಷರ ಸಂಬಂಧದಲ್ಲಿಯೂ ಇರುವುದು ಸಹ ಅತ್ಯುಚಿತವಾಗಿದೆ. ಯುದ್ಧದ ದೃಶ್ಯವನ್ನು ಚಿತ್ರವತ್ತಾಗಿಸುವುದಲ್ಲದೆ ಸಂದರ್ಭದ ಅರ್ಥವನ್ನೂ ಪೋಷಿಸುವಂತೆ ಇವುಗಳ

ರೀತಿಯಿಂದೆ. ನಾಲಾಗಿ ಬಂದ ಇಂಥ ಪ್ರಸ್ತೋಪರ ಉಪಮೆಗಳನ್ನು ಕನ್ನಡ ಭಾಗವತಕಾರ ಕಣ್ಣುಮುಚ್ಚಿ ಕೈಬಿಟ್ಟಿದ್ದಾನ, ಆದರೆ ಇದನ್ನೆಲ್ಲ ಗಮನಿಸಿದ ಮೇಲೂ ಒಟ್ಟು ಅನುವಾದದಲ್ಲಿ ಕನ್ನಡ ಭಾಗವತದ ಧ್ರುವಕಥೆ ಮೂಲದ ಔಜ್ವಲ್ಯಕ್ಕೆ ಎಷ್ಟೂ ಕಡಿಮೆಯಾಗದೆ ರೂಪುಪಡೆದಿದೆ ಎಂದು ಹೇಳಬೇಕಾಗುತ್ತದೆ.

ಈ ಹಿಂದೆ ಹೇಳಿದ ಎರಡು ಅಪ್ರಕಟಿತ ಧ್ರುವ ಕೃತಿಗಳಲ್ಲಿ ಕೆ. ಬಿ ೧೯೯ರ ಹಸ್ತಪ್ರತಿ ಚಿಕ್ಕದು. ಇದರಲ್ಲಿ ಧ್ರುವ ಜನನದವರೆಗಿನ ಕಥ ಭಾಗವತದ ಕಥೆಗಿಂತ ಸ್ವಲ್ಪ ಭಿನ್ನವಾಗಿದೆ.

ಉತ್ತಾನಪಾದ ರಾಜ ಸುನೀತೆಯನ್ನು ದೂರಮಾಡಿ ಸುರುಚಿಯ ಜೊತೆ ಸಂಸಾರ ಮಾಡಿಕೊಂಡಿದ್ದ. ಅವನಿಗೆ ಬಹುಕಾಲದಿಂದ ಮಕ್ಕಳಿರಲಿಲ್ಲ. ಸಂತಾನಕ್ಕಾಗಿ ಜಪತಪ ಹೋಮ ಮಾಡಿದ, ದೇವಲೋಕದ ಋಷಿಗಳು ಅವನಿಗೆ ಮಾವಿನ ಹಣ್ಣೊಂದನ್ನು ಅನುಗ್ರಹಿಸಿ ಅದನ್ನು ಹಿರಿಯರಸಿಯಾದ ಸುನೀತಿಗೆ ಕೊಡಬೇಕೆಂದೂ ಅವಳು ಪುತ್ರವತಿಯಾಗುವಳೆಂದೂ ತಿಳಿಸಿದರು. ರಾಜ ಅದನ್ನು ಸುರುಚಿಗೆ ಕೊಟ್ಟ. ಅವಳು ಹಣ್ಣಿನ ರಸವನ್ನು ಹಾಲುತುಪ್ಪದೊಡನೆ ಸೇರಿಸಿ ಕುಡಿದಳು. ಹಿಂಡಿದ ಗೊರಟೆಯನ್ನು ಅಂಗಳಲ್ಲಿ ಬಿಸಾಡಿದಳು. ಇದನ್ನು ಕಂಡ ಮಂತ್ರಿ ಗೊರಟೆಯನ್ನು ತೆಗೆದಿಟ್ಟ.

ಸುನೀತೆಯ ದಾಸಿ ಪಡಿ ತೆಗೆದುಕೊಳ್ಳಲು ಬಂದಾಗ ಸುರುಚಿ ಪಡಿ ಕೊಡದೆ ಅವಳನ್ನು ಗದರಿಸಿ ಅಟ್ಟಿದಳು. ಮಂತ್ರಿ ಗುಟ್ಟಾಗಿ ಆ ದಾಸಿಯನ್ನು ಕರೆದು "ಹಿಂಡಿದರಲ್ಲ ರಸವು ಹೋಯ್ತಲ್ಲದೆ ಗಂಡು ಫಲವು ಸಿಕ್ಕದೆ ? ಕೊಂಡು ನಿಮ್ಮಮ್ಮನಿಗೆ ನೀಡು ಶೀಘ್ರದಲೊಡಗೊಂಡು ಬಹೆನು ರಾಯನ ಇಂದಿನ ಸುದ್ದಿಯ ಎಣಿಕೆಯ ಮಾಡದಾನಂದದೊಳಿರಲಿ" ಎಂದು ಹೇಳಿದ.

ಸುನೀತಿ ಮಾವಿನ ಫಲವನ್ನು ಬೀಜಸಹಿತ ತಿಂದಳು. ಪತಿಯನ್ನು ಎದುರ್ನೋಡುತ್ತಿದ್ದಳು. ಮಂತ್ರಿ ಮತ್ತಗಜ ಸಿಂಹಗಳ ಬೇಟೆಗೆಂದು ಹೇಳಿ ರಾಜನನ್ನು ಊರಿನಾಚೆಗೆ ಕರೆದು ತಂದ. ಸಂಜೆಯಾಯಿತು. ಕಾಡುಕತ್ತಲೆ ಕವಿಯಿತು. ಗುಡುಗು ಮಿಂಚುಗಳು ಕಾಣಿಸಿಕೊಂಡು ಜೋರು ಮಳೆ ಸುರಿಯಿತು. ಮಂತ್ರಿ ರಾಜನಿಗೆ ಗುಟ್ಟಾಗಿ ಬಳಿಯಲ್ಲೇ ಒಬ್ಬ ಗಣಿಕೆಯ ಮನೆಯಿರುವುದನ್ನು ತಿಳಿಸಲು ರಾಜ ಅಲ್ಲಿಗೆ ಹೋಗಲು ಬಯಸಿದ. ಸುನೀತಿ ರಾಜನನ್ನು ಆದರದಿಂದ ಸ್ವಾಗತಿಸಿದಳು. ರಾಜ ಅವಳ ಚೆಲುವಿಗೆ ಬೆರಗಾಗಿ ಇವಳು ಯಾರು ಪ್ರತ್ಯಕ್ಷ ಲಕ್ಷ್ಮಿಯೋ, ಪಾರ್ವತಿಯೋ, ದ್ರೌಪದಿಯೋ ಸೀತಾಂಗನೆಯೋ ಹೇಳು ಎಂದು ಮಂತ್ರಿಯನ್ನು ಕೇಳಿದ, ನಾನು ನಿಮ್ಮ

ಪಟ್ಟದರಸಿ ಸುನೀತಿ ಎಂದಳು ರಾಣಿ. ಮಂತ್ರಿ ರಾಜರಾಣಿಯರನ್ನು ಸೇರಿಸಿ ಹೊರಬಂದ. "ಪೊಡವೀಶಪತಿ ನಿಮ್ಮ ಮಡದಿಯಾಗಿ ಎನಗಿಂದು ಪರದೇಶಿತನ ಬಂದಿತು" ಎಂದು ಸುನೀತಿ ದುಃಖಿಸಲು ರಾಜ ಅವಳ ಕಣ್ಣೀರನ್ನೊರಸಿ "ದುಂಡು ಮುತ್ತಿನ ಕಂಠಮಾಲೆಯು ಪದಕವ ಅಂಗನೆಯ ಕೊರಳಿಗೆ ಹಾಕಿದ". ಸುನೀತಿ ಪತಿಯನ್ನು ಉಪಚರಿಸಿದಳು. ಇಬ್ಬರೂ 'ದ್ರಾಕ್ಷಿ ದಾಳಿಂಬದ ವನದಲಿ ಗಿಳಿವಿಂಡು ಮಾತಾಡಾಲಿಂಗಿಸಿದಂತೆ" ಪಟ್ಟೆಮಂಚದಲಿ ಮಲಗಿದರು.

ಮುಂದೆ ಧ್ರುವ ಹುಟ್ಟಿದ್ದು, ಅವನು ಬಾಲಕನಾಗಿ ಬೆಳೆದು ಸಭೆಗೆ ಒಂದದ್ದು ಸುರುಚಿಯಿಂದ ಅವನ ಮುಖಭಂಗ, ಕಾಡಿಗೆ ಹೊರಟದ್ದು, ನಾರದರ ಭೇಟಿ, ನಾರಾಯಣನ ಅನುಗ್ರಹ ಇವೆಲ್ಲ ಭಾಗವತದ ಕಥೆಯಲ್ಲಿ ಇರುವಂತೆಯೇ ಇವೆ,

ಮೇಲಿನ ಕಥೆ ಜನಪದ ಕಥೆಗಳ ಧಾಟಿಗೆ ಹೊರಳಿರುವುದು ಕಾಣುತ್ತದೆ. ಆ ಕಥೆಗಳಲ್ಲಿ ಕಾಣುವಂಥ ತರ್ಕಮುಕ್ತವಾದ ಕೆಲವು ಅಂಶಗಳು ಸೇರಿಕೊಂಡಿವೆ, ರಾಜನಿಗೆ ಸುನೀತಿಯ ಗುರುತು ಸಿಗದೆ ಹೋದದ್ದು, ಅವಳು ಕಾಡಿನಲ್ಲಿ ಮನೆಮಾಡಿಕೊಂಡಿದ್ದದು. ಮಂತ್ರಿಯು ತಂತ್ರದಿಂದ ಇಬ್ಬರೂ ಭೇಟಿಯಾಗುವಂತೆ ಮಾಡುವ ಸ್ವಾತಂತ್ರ್ಯ ವಹಿಸಿದ್ದು, ಸುರುಚಿ ಎಸೆದ ಮಾವಿನ ಓಟೆ ಸುನೀತಿಗೆ ಮಂತ್ರಿ ಮತ್ತು ದಾಸಿಯರ ಮೂಲಕ ದೊರೆತದ್ದು ಇವೆಲ್ಲ ಒಂದು ಶಿಷ್ಟಕಥೆಗಿಂತ ಹೆಚ್ಚಾಗಿ ಜನಪದಕಥೆಗೆ ಒಗ್ಗುವ ಧಾಟಿಗಳೆಂದು ಹೇಳಬಹುದು.

ಅಪ್ರಕಟಿತ ಕೃತಿಗಳಲ್ಲಿ ಎರಡನೆಯದಾದ ಧ್ರುವಯಕ್ಷಗಾನ ಮೇಲಿನ ಕೃತಿಗಿಂತ ಸ್ವಲ್ಪ ದೊಡ್ಡದು. ಅದಕ್ಕಿಂತ ಹೆಚ್ಚಿನ ವಿವರಗಳಿಂದ ಕೂಡಿದ್ದು ಹೆಚ್ಚು ಪ್ರೌಢವೂ ಆಗಿದೆ. ಆರಂಭಭಾಗದಲ್ಲಿ ಇದರ ಕಥೆ ಮೊದಲಿನದರ ಕಥೆಯನ್ನು ಕೆಲಮಟ್ಟಿಗೆ ಹೋಲುತ್ತದೆ. ಆದರೆ ಅದರಿಂದ ಮತ್ತು ಭಾಗವತದ ಧ್ರುವ ಕಥೆಯಿಂದ ಅನೇಕ ವಿವರಗಳಲ್ಲಿ ಭಿನ್ನವಾಗಿರುವುದೂ ಉಂಟು. ಪುರಾಣ ಜಾನಪದಗಳೆರಡರ ಮಿಶ್ರಣದಂತೆ ಕಾಣುತ್ತದೆ ಇದು. ಅದರ ಕಥಾವಿನ್ಯಾಸ ಹೀಗಿದೆ:

ಉತ್ತಾನಪಾದರಾಜ ಮಕ್ಕಳಿಲ್ಲದ ಚಿಂತೆಯಲ್ಲಿದ್ದ. ಒಮ್ಮೆ ಸಪ್ತಋಷಿಗಳು ಬಂದರು. ಮಂತ್ರಿಸಿದ ಮಾವಿನ ಫಲವನ್ನು ಕೊಟ್ಟು ಸುನೀತಿಗೆ ಕೊಡುವಂತೆ ಹೇಳಿ ಹೋದರು. ಆದರೆ ಆ ಹಣ್ಣನ್ನು ತನಗೆ ಕೊಡಬೇಕೆಂದು ಸುರುಚಿ ಹಟಹಿಡಿದಳು. ಹಣ್ಣು ತಿಂದು ಓಟೆಯನ್ನು ಬಿಸಾಡಿದಳು. ತನ್ನ ದೂತಿಯಿಂದ ಅದನ್ನು ಪಡೆದ ಸುನೀತಿ ಗೋವಿಂದನನ್ನು ಸ್ಮರಿಸಿ ಅದನ್ನು ಭುಂಜಿಸಿದಳು. ಸುನೀತಿಗೆ ಮೊದಲು, ಸುರುಚಿಗೆ ಅನಂತರ ಗಂಡುಮಕ್ಕಳಾದರು,

'ಕ್ರೂರಕರ್ಮೆ ದುರಾಚಾರೆ'ಯಾದ ಸುರುಚಿ 'ಮನದಲಸೂಯೆವೆತ್ತು' ತನ್ನ 'ಕೇಡಿಂಗವನ ಕೇಡುಗಳ' ಬಗೆದಳು. ಈ ಹುಡುಗ ಉಳಿದರೆ ತನ್ನ ಮಗನಿಗಿಂತ ಮೇಲಾಗುತ್ತಾನೆ, ರಾಜ್ಯ ಪಡೆಯುತ್ತಾನೆ ಎಂದು ಅವನನ್ನು ಕೊಲ್ಲಲು ಹವಣಿಸಿದಳು. ಧ್ರುವನಿಗೆ ವಿಷದ ಕಜ್ಜಾಯ ಕೊಟ್ಟರೆ 'ಮಂದರಧರಹರಿ ಮಾಧವ ನೆನುತದ' ತಿಂದೂ ಅವನು ಉಳಿದ, 'ಹರಿಭಕ್ತರಿಗೆ ವಿಷವಮೃತವೆಂಬ ಮಾತ ಖರೆಯೆಂದು ಲೋಕಕೆ ತೋರುವಂದದಲಿ ತರಳನು ಪರಮ ಸೌಖ್ಯದೊಳಿರೆ ಕಂಡು' ಮನಸ್ಸಿನಲ್ಲೇ ಸುರುಚಿ ಕುದಿದಳು.

ವಿಷ ತಿಂದೂ ಉಳಿದ ಧ್ರುವನನ್ನು ಸುರುಚಿ ಕತ್ತಲಲ್ಲಿ ಹಿಡಿಸಿ ತಲೆಕಡಿಸಿದಳು, ಇದನ್ನು ಬರಿದೆ ಬಿಸಾಡಿದರೆ ಏನು ಬಂತು ? ಮೋಹದ ಮಗನ ಮಾಂಸವನ್ನು ರಾಜನಿಗೆ ಉಣಿಸುವೆನೆಂದು 'ದ್ರೋಹಿ ಪಾಕವಗೈದು ಬಡಿಸಿದಳವಗೆ'. ಅವನ ಜೊತೆ ಸುನೀತಿಗೂ ಬಡಿಸಿದಳು. ಊಟಕ್ಕೆ ಕುಳಿತ ಸುನೀತಿ 'ನನ್ನ ಮರಿಯಾನೆ ಬಾ ಊಟಕ್ಕೆ ಬಾ' ಎಂದು ಕರೆದಾಗ ಸತ್ತ ಹುಡುಗ ಮೈದಾಳಿ ಬಂದುಬಿಟ್ಟ.

ಒಮ್ಮೆ ಬಾಲಕ ಧ್ರುವ ರಾಜನ ಸಭೆಗೆ ಬಂದ; ಎತ್ತಿಕೋ ಎಂದು ರಾಜನನ್ನು ಅತ್ತು ಕಾಡಿದ. ಸುರುಚಿ ಕೋಪಗೊಂಡಾಳೆಂದು ರಾಜ ಸುಮ್ಮನಾಗಿಬಿಟ್ಟ. 'ತಂದೆ ರಕ್ಕಸನಾದ । ತಾಯಿ ಹೆಬ್ಬುಲಿಯಾದ । ಇಂದು ಕೂಡಿದ ಸಭೆಯಲ್ಲ ॥ ಹೊಂದಲ ಸೌಖ್ಯವಾಗಿಹ ಘೋರಾರಣ್ಯ' ಎಂದು ಹುಡುಗ ಅಳಲಿದ. ತಾಯಿಯ ಬಳಿ ದೂರಿದ. ಅವಳ ಮಾತಿನಂತೆ ಭಗವಂತನನ್ನು ಕಾಣಲು ಕಾಡಿಗೆ ನಡೆದ. ಮುಂದೆ ನಾರದರ ಭೇಟಿ, ಅವರು ರಾಜನನ್ನು ಕಂಡದ್ದು ಎಲ್ಲ ನಮಗೆ ಪರಿಚಿತವಾಗಿರುವ ಕಥೆಯಲ್ಲಿರುವಂತೆಯೇ ಇದೆ.

ಧ್ರುವನ ಉಗ್ರ ತಪಸ್ಸಿನಿಂದ ಮೂರು ಲೋಕಗಳೂ ಬಸವಳಿದವು. ದೇವತೆಗಳು ಇಂದ್ರನನ್ನು ಕಂಡು

ಸಿಕ್ಕುತಿರ್ಪುದು ಕೊರಳಿನೊಳಗುಸು
ರುಕ್ಕುತಿರ್ಪುದು ಉಬ್ಬಸಂಗಳು
ವಕ್ಕಲಿಕ್ಕುವನಧಿಕ ತಪದಲಿ
ದಿಕ್ಕುದೆಸೆಗಳ ಕಾಣೆವು

ಎಂದು ದೂರಿದರು. ಇಂದ್ರ 'ನರಮಾಂಸಹಿತರಾದ ಘೋರಾಕಾರದಸುರರು ಶಾಕಿನಿ ಡಾಕಿನಿ'ಯರನ್ನು ಕರೆಸಿ ನೀವು ಬಲಸಹಿತ ಹೋಗಿ ಹುಡುಗನ ತಪಸ್ಸನ್ನು ಕೆಡಿಸಿ ಎಂದು ಆಜ್ಞಾಪಿಸಿದ,

ಅಡಬಲ್ಲಿ ಶಾಕಿನಿ ಕಡುಜಾಣೆ ಡಾಕಿಣೆ'ಯರು ಧ್ರುವನನ್ನು ಕಂಡು ಅವನನ್ನು ಹೇಗೆ ತಿನ್ನಬೇಕೆಂದು ಹೇಳಿಕೊಳ್ಳುವ ಭಾಗ ವಿಶಿಷ್ಟವಾಗಿದೆ. ಇಬ್ಬರೂ ಅವನನ್ನು ಹಿಡಿದು ತರಲು ಹೋದಾಗ ಘೋರ ತಪದ ಜ್ವಾಲೆ ಬಡಿದು ಹಿಂದೆ ಸರಿದರು. ವರುಣನ ಪಾಶದಿಂದಲೂ ಅವನನ್ನು ಬಂಧಿಸಲಾಗಲಿಲ್ಲ. ಧ್ರುವನ ತಾಯಿಯ ರೂಪದಲ್ಲಿ ಕರೆದರು. ಯಾವುದೂ ಬಾಲಕನನ್ನು ಮುಟ್ಟಲಿಲ್ಲ, ಕಡೆಗೆ ಬ್ರಹ್ಮ ಇಂದ್ರಸಹಿತರಾಗಿ ವಿಷ್ಣುವಿನಲ್ಲಿ ಮೊರೆಯಿಟ್ಟರು. ಹುಡುಗನಿಗೆ ಕೊಟ್ಟ ಕಷ್ಟಕ್ಕೆ ವಿಷ್ಣು ಅವರನ್ನು ನಿಂದಿಸಿ ನಾನು ಅವನಲ್ಲಿಗೆ ಹೋಗುತ್ತೇನೆ, ಅದನ್ನು ನೀವು ಹೇಳುವುದೇಕೆ ? 'ಕರುವಿನ ಬಳಿಗೆ ತಾಯಿ ಪೋಪ ಬಗೆಗೆ ಪರರು ಪ್ರಾರ್ಥಿಪುದ್ಯಾಕೆ ?' ಎಂದು ಹೇಳಿ ಧ್ರುವನಿಗೆ ಕಾಣಿಸಿಕೊಂಡು ಅನುಗ್ರಹಿಸಿದ.

ಧ್ರುವ ರಾಜನಾಗಿದ್ದಾಗ ಒಮ್ಮೆ ಪ್ರಜೆಗಳು ಬಂದು ವನ್ಯಪ್ರಾಣಿಗಳ ಹಾವಳಿ ಹೆಚ್ಚಾಗಿದೆಯೆಂದು ದೂರಿದರು. ಧ್ರುವ ಬೇಟೆಗೆ ಹೊರಡಲು ಸಿದ್ಧನಾಗುತ್ತಿರುವಾಗ, ಉತ್ತಮ ತಾನೇ ಹೋಗಲು ಅಪ್ಪಣೆ ಪಡೆದು ಹೊರಟ.

ಉತ್ತಮ ಮಧ್ಯಾಹ್ನ ಪರ್ಯಂತ ಬೇಟೆಯಾಡಿ ಒಂದು ಕೊಳದ ಬಳಿ ವಿಶ್ರಮಿಸುತ್ತಿದ್ದ, ಶಬರನ ವೇಷ ತಾಳಿ ಬೇಟೆಗೆಂದು ಅದೇ ಕಾಡಿಗೆ ಬಂದಿದ್ದ ಸುನೇತ್ರ ಎಂಬ ಯಕ್ಷ ಒಂದು ಮೃಗಕ್ಕೆ ಬಾಣ ಹೊಡೆದ. ಅದು ಉತ್ತಮನಿದ್ದ ಸ್ಥಳಕ್ಕೆ ಓಡಿಬಂತು ಉತ್ತಮನೂ ಅದಕ್ಕೆ ಬಾಣ ಹೊಡೆಯಲು ಮೃಗ ಕೆಳಗೆ ಬಿತ್ತು. ಸತ್ತ ಮೃಗ ತಮ್ಮದೆಂದು ಶಬರ ಉತ್ತಮ ಇಬ್ಬರ ನಡುವೆ ಕಲಹ ಆರಂಭವಾಗಿ ಯುದ್ಧದಲ್ಲಿ ಪರಿಣಮಿಸಿತು. ಸಾಹಸದಿಂದ ಕಾದಿದರೂ ಉತ್ತಮ ಸೋಲತೊಡಗಿದ. ನಿನ್ನ ತಾಯಿ ಹರಿಭಕ್ತನನ್ನು ಕಷ್ಟಕ್ಕೆ ಗುರಿಮಾಡಿದಳಾಗಿ ನೀನು ಸೋಲುತ್ತಿರುವೆ ಎಂದು ಯಕ್ಷ ಮೂದಲಿಸಿದ. ಹೋರಾಟದಲ್ಲಿ ಉತ್ತಮ ಮರಣಹೊಂದಿದ,

ಸುದ್ದಿ ಕೇಳಿ ಧ್ರುವ ಸುರುಚಿ ಎಲ್ಲ ದಿಗ್ಭ್ರಾಂತರಾದರು. ತಾನು ಹಿಂದೆ ಮಾಡಿದ್ದ ಕೆಟ್ಟ ಕೆಲಸಕ್ಕೆ ಸುರುಚಿ ತನ್ನನ್ನೇ ನಿಂದಿಸಿಕೊಂಡಳು, ಮಗನ ದೇಹವನ್ನು ಅರಸಿಕೊಂಡು ಕಾಡಿನಲ್ಲಿ ಅಲೆದಳು; ಮಧ್ಯೆ ಕಾಡುಕಿಚ್ಚಿಗೆ ಸಿಕ್ಕಿ ಸತ್ತಳು.

ಧ್ರುವ ಸೇನೆಯ ಸಹಿತ ಯಕ್ಷನಗರಿಗೆ ದಾಳಿಯಿಟ್ಟ. ಅವನ ಏಟಿಗೆ ಯಕ್ಷರು ತತ್ತರಿಸಿದರು, ಕುಬೇರನ ಬಳಿ ದೂರಿತ್ತರು. ಧ್ರುವನ ಮೇಲೆ ಯುದ್ಧಮಾಡಲು ಅಪ್ಪಣೆ ಕೊಡುವಂತೆ ಧೀರಯೋಧರನೇಕರು ಕುಬೇರನನ್ನು ಕೇಳಿದರು.

ಬಿಡು ಚಿಂತೆಯನು ರಾಜ ರಾಜಾ—ನಮಗೆ
ಕೊಡು ನೇಮವ ಸಜ್ಜನ ಕಲ್ಪಭೋಜಾ

ಜವನ ಝಂಕ್ಕಲಿಸುವೆವು । ಬವರದಲಿ ಕಾಲ ಭೈ
ರವನ ತೊಡೆಯ ಮುರಿದು
ಅವಘಡದ ಘೋರ ಮೃತ್ಯುವ ಗೆಲ್ಲುವೆವು
ಬಿಡು ಚಿಂತೆಯನು ರಾಜ ರಾಜಾ

ಕೀಳುವೆವು ಮೇರುವ
ಸೀಳುವೆವು ದಿಗ್ಗಜವ
ಏಳು ಕಡಲನು ಕುಡಿವೆವು—ಬರಿಯ
ಕೀಳು ಮಾನವನ ಭಯವ್ಯಾಕೆ ?

ಹೀಗೆ ಬೇಡಿ ಅಪ್ಪಣೆ ಪಡೆದು ಹೋದ ಯೋಧರೂ ಧ್ರುವನ ಪರಾಕ್ರಮದೆದುರು ಕಂಗೆಟ್ಟರು. ಆಗ ಅವನ ಅಜ್ಜನಾದ ಸ್ವಾಯಂಭುವ ಮನು ಬಂದು ಪರಹಿಂಸೆ ಸಲ್ಲದೆಂದು ಮೊಮ್ಮಗನಿಗೆ ತಿಳಿಸಲು ಅವನು ಯುದ್ಧ ನಿಲ್ಲಿಸಿದ. ಧ್ರುವ ಕುಬೇರರ ನಡುವೆ ಸಂಧಾನವಾಯಿತು. ಮುಂದೆ ಧ್ರುವ ಕೆಲಕಾಲ ರಾಜ್ಯವಾಳಿ ತಾಯಿಯ ಜೊತೆ ಪರಮಪದಕ್ಕೆ ಹೋಗಿ ಸೇರಿದ.

ಹಿಂದಿನ ಕೃತಿಯಲ್ಲಿ ರಾಜ ಸುನೀತಿಯನ್ನು ಊರ ಹೊರಗೆ ಇಟ್ಟಿದ್ದು, ಮಂತ್ರಿಯ ತಂತ್ರದಿಂದ ಅವರು ಕೂಡಿದ್ದು ಬರುತ್ತದೆ. ಇದರಲ್ಲಿ ಅವು ಯಾವುವೂ ಇಲ್ಲ. ಎರಡರಲ್ಲೂ (ಭಾಗವತದಲ್ಲಿ ಇಲ್ಲದ) ಮಾವಿನ ಫಲದ ಪ್ರಸಂಗವಿದೆ. ಸುರುಚಿ ಧ್ರುವನಿಗೆ ವಿಷ ಉಣಿಸಿದ್ದು, ಅವನ ತಲೆಕಡಿಸಿ ತಂದೆತಾಯಿಗಳಿಗೆ ಬಡಿಸಿದ್ದು, ಆದರೂ ಹರಿಯನುಗ್ರಹದಿಂದ ಅವನು ಬದುಕಿಬಂದದ್ದು, ಧ್ರುವ ರಾಜನಾಗಿರುವಾಗ ಪ್ರಜೆಗಳು ವನ್ಯಮೃಗಗಳ ಕಾಟವನ್ನು ಹೇಳಿಕೊಳ್ಳಲು ಉತ್ತಮ ಅವುಗಳನ್ನು ಬೇಟೆಯಾಡಲು ಹೊರಟು ಶಬರ ವೇಷದ ಯಕ್ಷನೊಡನೆ ಸಾಹಸದಿಂದ ಕಾಳಗಮಾಡಿದ್ದು—ಇವೆಲ್ಲ ಈ ಕೃತಿಯಲ್ಲಿ ಮಾತ್ರ ಇರುವಂಥವು. ಉತ್ತಮನ ಬೇಟೆಯ ವರ್ಣನೆ ಮತ್ತು ಯಕ್ಷನೊಡನೆ ಅವನ ಹೋರಾಟದ ನಿರೂಪಣೆ ತುಂಬ ದೀರ್ಘವಾಗಿದೆ. ಹೀಗೆ ಈ ಯಕ್ಷಗಾನ ಕೃತಿ ಹಿಂದೆ ಪ್ರಸ್ತಾಪಿಸಿದ ಎಲ್ಲ ಧ್ರುವ ಕಥೆಗಳಿಂದಲೂ ಪ್ರತ್ಯೇಕವಾಗಿದೆ.

ತಿಮ್ಮಪ್ಪದಾಸರು ಮೂಲಭಾಗವತದ ಯಾವ ಅಂಶಗಳನ್ನೂ ಕಳಚದೆ ಯುಕ್ತ ತೋರಿದ ಕಡೆಯಲ್ಲಿ ಅದನ್ನು ವಿಸ್ತರಿಸಿಕೊಂಡಿದ್ದಾರೆ. ಜನಪದ ವರ್ಣನೆ, ರಾಣಿಯರ ಚೆಲುವಿನ ವರ್ಣನೆ, ಅವರ ಮಕ್ಕಳ ಬಾಲಲೀಲೆಗಳ ವರ್ಣನೆ, ಇವೆಲ್ಲ ಮೂಲದಲ್ಲಿ ಇಲ್ಲದ ಅಂಶಗಳಾಗಿವೆ. ಸುರುಚಿ ಧ್ರುವನನ್ನು ಜರಿಯುವುದು, ಧ್ರುವನ ದುಃಖಕ್ಕೆ ಸುನೀತಿ ಕಾರಣವನ್ನು ಕೇಳುವುದು, ಸಂತೈಸುವುದು ಮೊದಲಾದುವು

ಮೂಲಕ್ಕಿಂತ ತುಂಬ ವಿವರವಾಗಿ ಬಂದಿವೆ. ಧ್ರುವ ಕಾಡಿಗೆ ಹೋಗುವಾಗ ಜನರು ಸುರುಚಿಯನ್ನು ಜರಿದು ಮಾತನಾಡಿಕೊಳ್ಳುವ ಭಾಗ ಪೂರ್ತಿಯಾಗಿ ಹೊಸದು. ಊರುಬಿಟ್ಟು ಹೋಗುತ್ತಿರುವ ಧ್ರುವ ತನಗೆ ಹರಿ ಒಲಿದಾನೆ ಎಂದು ಯೋಚಿಸುತ್ತ ಹೋಗುವುದು, ನಾರದರು ಉತ್ತಾನಪಾದನಲ್ಲಿಗೆ ಬರುವಾಗ ಅವರನ್ನು ಮಾರುಗಟ್ಟೆ, ವೇಶ್ಯಾವಾಟಿಕೆಗಳ ಮಾರ್ಗವಾಗಿ ಕರೆತಂದು ಆ ನೆಪದಲ್ಲಿ ಆ ಕೇರಿಗಳ ವರ್ಣನೆ ಮಾಡಿರುವುದು ಇಲ್ಲಿ ಮಾತ್ರ, ಹೀಗೆ ಈ ಕೃತಿ ಉದ್ದಕ್ಕೂ ವಿಸ್ತಾರದ ಕಡೆಗೆ ಒಲವು ಬೆಳೆಸಿಕೊಂಡಿರುವುದು ಕಾಣುತ್ತದೆ. ಕೆಲವು ಕಡೆ ಪಾತ್ರದ ಸ್ವಭಾವವನ್ನು ಬೆಳಗಲು, ಮತ್ತೆ ಕೆಲವು ಕಡೆ ಕೃತಿಗೆ ಅಗತ್ಯವೆಂದು ತಾವು ಭಾವಿಸಿಕೊಂಡ ಸಾಂಪ್ರದಾಯಿಕ ವರ್ಣನೆಗಳನ್ನು ತರಲು, ಇನ್ನು ಕೆಲವು ಕಡೆ ತಮಗೆ ಪ್ರಿಯವಾದ ಹರಿಸಂಕೀರ್ತನೆಯನ್ನು ಮಾಡಲು ಹೀಗೆ ಕೃತಿಯ ಒಡಲನ್ನು ಬೆಳೆಸಲಾಗಿದೆ ಇವುಗಳಲ್ಲಿ ಕೆಲವು ಕಥಾದೃಷ್ಟಿಯಿಂದ ಉಚಿತವಾಗಿದ್ದು ರಸಪೋಷಕವಾಗಿವೆ ಎನ್ನಬಹುದು. ಒಂದೆರಡು ನಿದರ್ಶನಗಳ ಮೂಲಕ ಈ ಅಂಶವನ್ನು ಇಲ್ಲಿ ಪರಿಶೀಲಿಸಬಹುದು.

ತನ್ನನ್ನು ತೊಡೆಯ ಮೇಲೆ ಕೂರಿಸಿಕೊಳ್ಳಬೇಕೆಂದು ಧ್ರುವ ತಂದೆಯನ್ನು ಕೇಳುತ್ತಾನಷ್ಟೆ. ರಾಜ ಹಾಗೆ ಮಾಡಲು ನಿರಾಕರಿಸಿದನೆಂಬ ಮಾತು ಮಾತ್ರ ಮೂಲದಲ್ಲಿದೆ. "ನಾರು ರಕ್ಷಂತಂ ಧ್ರುವಂ ರಾಜಾಂsಭ್ಯನಂದತ" ಎನ್ನುವುದು ಅಲ್ಲಿಯ ಮಾತು ಏಕೆ ಆವನು ನಿರಾಕರಿಸಿದನೆಂಬುದಕ್ಕೆ ಕಾರಣವನ್ನು ಅದು ಹೇಳುವುದಿಲ್ಲ. ಕನ್ನಡ ಭಾಗವತದಲ್ಲಿ "ಉತ್ತಮನ ತಾಯ್ ಸುರುಚಿ ಮುನಿದ ಪಳೆತ್ತಿಕೊಂಡಡೆನುತ್ತ ಸಂಶಯಚಿತ್ತ" ನಾದ ರಾಜ ಧ್ರುವನನ್ನು ಕಂಡರೂ ಕಾಣದಂತೆ ಉಪೇಕ್ಷಿಸಿದ ಎಂದಿದೆ. ತಿಮ್ಮಪ್ಪದಾಸರಲ್ಲಿ ಮಾತ್ರ ರಾಜನ ಮನಸ್ಸಿನ ಹೊಯ್ದಾಟವನ್ನು ಸೂಚಿಸಲು ಮೂರು ಪದ್ಯಗಳು ಬಂದಿವೆ. ಧ್ರುವ ತನ್ನನ್ನು ಎತ್ತಿಕೊ ಎಂದು ಕಾಡುವುದನ್ನು ರಾಜ ಸುಮ್ಮನೆ ನೋಡುತ್ತಿದ್ದಾನೆ. ಅವನಿಗೆ ಮಗುವಿನ ಮಾತನ್ನು ನಡೆಸುವ ಆಸೆಯಿದೆ, ಆದರೆ ಸುರುಚಿಗೆ ಇದು ಹೇಗೆನಿಸೀತೋ ಎಂಬ ಅನುಮಾನ. ಅದಕ್ಕಾಗಿ ಒಪ್ಪಿಗೆಗೆಂಬಂತೆ ಅವಳ ಮುಖ ನೋಡುತ್ತಾನೆ. ಅಲ್ಲಿಂದ ಅನುಕೂಲವಾದ ಪ್ರತಿಕ್ರಿಯೆ ಬರುತ್ತಿಲ್ಲ ಎಂತಲೇ "ಮೋಹವಾ ಸುತನ ಮೇಲತಿಪೂರ್ಣವಾಗಿರಲಾ ಹೆಂಡತಿಯ ಮುಖ ನೋಡಿ ಬಾಹುಗಳಿಂ ಬಿಗಿಯಪ್ಪದೆ" ಮುದ್ದಿಸದೆ ಮೌನವಾಗಿ ಬಿಡುತ್ತಾನೆ. ಮೂಲದ ಮಾತಿನಂತೆ ಹೋದರೆ ರಾಜನಿಗೇ ಮಗನ ಬಗ್ಗೆ ಪ್ರೀತಿಯಿರಲಿಲ್ಲ ಎಂಬ ಅರ್ಥ ಹೊರಡುತ್ತದೆ. ಕನ್ನಡ ಭಾಗವತಕಾರ ಇದನ್ನು ಕೊಂಚ ವ್ಯತ್ಯಸ್ತಗೊಳಿಸಿದ್ದರೂ ರಾಜನಿಗೆ ಧ್ರುವನ ಮೇಲೆ ತುಂಬ ಮೋಹವಿತ್ತೆನ್ನುವುದಾಗಲೀ, ಹೆಂಡತಿಗೆ ಹೆದರಿ (ಮಗನ ಆಸೆಯನ್ನಲ್ಲದೆ) ತನ್ನ ಆಸೆಯನ್ನೂ ಅದುಮಿ ಕೊಂಡನೆಂದಾಗಲೀ ಸೂಚಿತವಾಗಿಲ್ಲ. ತಿಮ್ಮಪ್ಪದಾಸರ

ನಿರೂಪಣೆಯಲ್ಲಿ ಈ ಹೊಯ್ದಾಟವೂ ಆ ಮೂಲಕ ತಂದೆಯ ಅಸಹಾಯಕತೆಯೂ ಧ್ವನಿತವಾಗಿದೆ, ಕಿರಿಯ ಹೆಂಡತಿಯ ಮೇಲಿನ ಮೋಹ, ತಿಳಿವಳಿಕೆಯಿದ್ದೂ ಅದರಂತೆ ನಡೆಯಲಾಗದ ಅವಳ ಬಗೆಗಿನ ದಾಕ್ಷಿಣ್ಯ, ಆ ದಾಕ್ಷಿಣ್ಯದಿಂದಾದ ಅನರ್ಥ ಎಲ್ಲ ಪರಿಣಾಮಕಾರಿಯಾಗಿ ಸೂಚಿತವಾಗುತ್ತದೆ. ತಂದೆ ಕಾರಣವಿಲ್ಲದೆ ತನ್ನ ಮಗನಿಗೆ ಮುಖಭಂಗ ಮಾಡಿದನೆಂಬ ಮಾತಿಗಿಂತ ಇದೇ ಹೆಚ್ಚು ಸಹಜವಾಗಿ ತೋರುತ್ತದೆ. ಮುಂದೆ ಧ್ರುವ ಕಾಡಿಗೆ ಹೋದ ಮೇಲೆ ನಾರದರ ಬಳಿ ಅವನು ತನ್ನ ನಡತೆಯನ್ನು ನಿಂದಿಸಿಕೊಂಡು ಮಗನ ಸಲುವಾಗಿ ಹಲುಬುವುದಾಗಲೀ ಕಡೆಯಲ್ಲಿ ಮಗ ಬಂದ ನೆಂದು ಕೇಳಿ ಆನಂದಾಶ್ರು ಸುರಿಸುತ್ತಾ ಅವನನ್ನು ಸಂಭ್ರಮದಿಂದ ಮುದ್ದಾಡುವು ದಾಗಲೀ ಇದರಿಂದ ಹೆಚ್ಚು ಅರ್ಥವತ್ತಾಗುತ್ತದೆ.

ಇದೇ ರೀತಿ ಧ್ರುವ ಸುರುಚಿಯ ಮೂದಲೆಯಿಂದ ನೊಂದು ಅಳುತ್ತ ತಾಯಿಯ ಬಳಿ ಬಂದ ಸನ್ನಿವೇಶದಲ್ಲೂ ದಾಸರು ಮೂಲದಲ್ಲಿಲ್ಲದ ಹಲವು ಮಾರ್ಮಿಕವಾದ ಮಾತುಗಳನ್ನು ಸೇರಿಸಿ ಸನ್ನಿವೇಶದ ಕರುಣಾಗುಣ ವ್ಯಂಜಿಸುವಂತೆ ಮಾಡುತ್ತಾರೆ. ಸುರುಚಿ ಧ್ರುವನನ್ನು ತಿರಸ್ಕಾರದಿಂದ ಕಂಡು ಆಡಿದ ಮಾತುಗಳನ್ನು ಸುತ್ತಲಿದ್ದ ವನಿತೆಯರು ಅವಳಿಗೆ ಹೇಳುತ್ತಾರೆ ಕೇಳಿ ಸುನೀತಿಯ ಎದೆ ದುಃಖ ದಿಂದ ಬಿರಿದು ಹೋಗುತ್ತದೆ "ನನ್ನ ಬಾಳು ಎಂಥದೆಂದು ಕಂಡಿರಲ್ಲವೆ? ನನ್ನಂಥ ವನಿಗೆ ಬಾಳುವ ಆಸೆ ಬೇರೆ ಎಂದು ಅವಳು ನನ್ನ ಮುದುಗನನ್ನು ಛೇಡಿಸಬಹುದೇ? ಅವಳ ಮಗುವನ್ನು ರಾಜ ತೊಡೆಯ ಮೇಲೆ ಕೂರಿಸಿಕೊಂಡು ಮುದ್ದಿಸುತ್ತಿರುವಾಗ ನನ್ನ ಮಗು ಅದಕ್ಕೆ ಆಸೆಪಟ್ಟರೆ ಒಂದು ಅಪಚಾರವೇ? ಅದಕ್ಕೆ ಇಷ್ಟು ಕ್ರೂರ ವಾದ ಮಾತೆ? ಲೋಕದಲ್ಲಿ ಪಾಪಿಗಳು ಎನ್ನುವವರಿದ್ದರೆ ಅದು ಬೇರೆ ಯಾರೂ ಅಲ್ಲ, ನಾವೇ. ನಮಗೆ ಅತ್ತ ದೈವಬಲವಿಲ್ಲ, ಇತ್ತ ಮನುಷ್ಯಸಹಾಯವೂ ಇಲ್ಲ. ನನ್ನನ್ನು ನಿರ್ಭಾಗ್ಯಳೆಂದು ಅವಳು ಜರಿದಿದ್ದರೆ ಅದು ಸ್ವಂತ ಬುದ್ಧಿಯಿಂದಲ್ಲ. ನನ್ನ ಹಣೆಯಲ್ಲಿ ವಿಧಿ ಹಾಗೆ ಬರೆದಿದ್ದರಿಂದ ಅಂದಳು. ಮಗೂ, ನೀನು ತಾನೆ ಸಿರಿವಂತ ಮಕ್ಕಳ ಜೊತೆ ಯಾಕೆ ಆಡಲು ಹೋದೆಯಪ್ಪ? ನೀನು ಆಡಬೇಕಾದದ್ದು ನಿನ್ನಂಥ ಪರದೇಸಿ ಹುಡುಗರ ಜೊತೆ ಮಾತ್ರ. ನೀನು ತಪ್ಪು ಮಾಡಿದೆ ಆದ್ದರಿಂದ ಅನ್ನಿಸಿಕೊಂಡೆ ಅಷ್ಟೆ", ಸುನೀತಿಯ ಈ ಮಾತುಗಳೆಲ್ಲ ನೊಂದ ಹೆಣ್ಣುಜೀವದ ಸಂಕಟದಾಳದಿಂದ ಎದ್ದ ಮಾತುಗಳು. ಇಂಥ ಮಾತುಗಳ ಮೂಲಕ ಪತಿಯ ತಿರಸ್ಕಾರಕ್ಕೆ, ಸವತಿಯ ಮಾತ್ಸರ್ಯ ಭರ್ತ್ಸನೆಗಳಿಗೆ ಸಿಕ್ಕ ಹೆಣ್ಣಿನ ಪಾಡು ಎಂಥದೆನ್ನುವುದನ್ನು ತಿಮ್ಮಪ್ಪದಾಸರು ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ.

ಹೀಗೆ ಹೇಳಿದ ಮಾತ್ರಕ್ಕೆ ತಿಮ್ಮಪ್ಪದಾಸರು ಮೂಲದಿಂದ ಭಿನ್ನವಾದಲ್ಲೆಲ್ಲ ರಸಪೋಷಕವಾದ ಅಂಶಗಳನ್ನೇ ತಂದಿದ್ದಾರೆಂದು ಭಾವಿಸಬೇಕಾಗಿಲ್ಲ. ಕೆಲವು

ಕಡೆ ಅವರು ಹೊಸದಾಗಿ ಸೇರಿಸಿರುವ ವರ್ಣನಾ ಭಾಗಗಳು ಸ್ವಲ್ಪ ಉದ್ದವಾದವೆನಿಸಿದರೆ ಮತ್ತೆ ಕೆಲವು ಕಡೆ ಅನಗತ್ಯವಾದವೆನಿಸುತ್ತವೆ. 'ಅನುಪಮ ಪುಷ್ಪದ ವನವು' ಎಂಬ ನಲವತ್ತೊಂಬತ್ತು ಪದ್ಯಗಳ ಇಡಿಯ ಅಧ್ಯಾಯ ಕೇವಲ ಮರಗಿಡ ಪುಷ್ಪಗಳ ಪಟ್ಟಿಯನ್ನು ಕೊಡುವುದಕ್ಕಾಗಿಯೇ ಬಳಕೆಯಾಗಿದೆ. ಅದಕ್ಕೆ ಮುಂಚಿನದಾದ 'ಮುನಿನಾಥನೈತಂದ ಮುದದಿ' ಎಂಬ ಅಧ್ಯಾಯ ಈ ಕಥೆಯಲ್ಲಿ ಎಡೆಪಡೆಯಲು ಸಾಧ್ಯವೇ ಇಲ್ಲದ ಶೃಂಗಾರರಸಕ್ಕಾಗಿ ಬಂದಿದೆ. ನಾರದರು ಧ್ರುವನನ್ನು ಮಧುವನಕ್ಕೆ ಕಳಿಸಿ ಉತ್ತಾನಪಾದರಾಜನಲ್ಲಿಗೆ ಬರುತ್ತಾರಷ್ಟೆ. ರಾಜಧಾನಿಯ ಕೇರಿಗಳನ್ನು ಹಾದುಬರುವಾಗ ನಾರದರು ಹೂ ಮಾರುವ ಬೀದಿಗೂ ಗಣಿಕೆಯರ ಕೇರಿಗೂ ಬರುತ್ತಾರೆ, ಅವರು ಹಾದುಬಂದ ಕೇರಿಗಳನ್ನು ವರ್ಣಿಸುವ ನೆಪದಲ್ಲಿ ವಿಟ ಗಣಿಕೆಯರ ಮಾತು ನಡತೆ ಚೇಷ್ಟೆಗಳೆಲ್ಲ ಪ್ರಸ್ತಾಪವಾಗುತ್ತವೆ. ಸಾಧ್ಯವಿರುವಲ್ಲೆಲ್ಲ ಮಾತು ಎರಡೆರಡು ಅರ್ಥಗಳಲ್ಲಿ ಬಳಕೆಯಾಗುತ್ತದೆ. ಅದರಲ್ಲಿ ಒಂದು ಅರ್ಥ ಶೃಂಗಾರದ ಪರವಾಗಿರುವುದು ಸೂಚಿತವಾಗುತ್ತದೆ. ಈ ಶೃಂಗಾರ ಕಾವ್ಯಕ್ಕೆ ಅನಗತ್ಯವಾಗಿರುವುದು ಮಾತ್ರವಲ್ಲ ಅದರ ನಿರ್ವಹಣೆಯ ರೀತಿ ಕೂಡ ಅಂಥ ಉತ್ತಮ ನೆಲೆಯದಲ್ಲ ಎನಿಸುತ್ತದೆ. 'ಸರಿಯುಂಟ ಅಬಲೆಯರಿಂಗೆ' ಎಂಬ ಭಾಗದಲ್ಲಿ ಬರುವ ಸುಮಾರು ಮೂವತ್ತು ಪದ್ಯಗಳು ನೀರಿಗೆಂದು ಬಂದ ವನಿತೆಯರ ಚೆಲುವು ಚೇಷ್ಟೆಗಳನ್ನು ವರ್ಣಿಸಲೆಂದೇ ಬಂದಿವೆ. ಈ ಶೃಂಗಾರಭಾಗದಲ್ಲಿ ಬರುವ ಜನಪದದ ವರ್ಣನೆಯಲ್ಲಿ ಅರ್ಥಚಮತ್ಕಾರದತ್ತ ಕವಿಯ ದೃಷ್ಟಿಯಿರುವುದು ಕಾಣುತ್ತದೆ. ಇಂಥ ಚಮತ್ಕಾರಗಳಲ್ಲಿ ಕೆಲವು ಅನುಕರಣೀಯವಾಗಿದ್ದು ಮತ್ತೆ ಕೆಲವು ಹೊಸವಾಗಿರುವಂತಿವೆ. ಇವು ರಂಜಕವಾಗಿದ್ದು ಓದುಗನ ಬುದ್ಧಿಗೆ ಆಹ್ಲಾದಕೊಡುವಂಥವಾಗಿದ್ದರೂ ಕಾವ್ಯದಲ್ಲಿ ಅದು ಉಚಿತವಾಗಿ ಬಂದು ಸೇರಿದೆ ಎನಿಸುವುದಿಲ್ಲ. ಹಾಗಿದ್ದೂ ದಾಸರು ಇಂಥ ವರ್ಣನೆಗಳನ್ನು ತಂದದ್ದೇಕೆ ಎಂಬ ಪ್ರಶ್ನೆ ಏಳಬಹುದು. ಬಹುಶಃ ತಾವು ಇದನ್ನು ಒಂದು ಪ್ರತ್ಯೇಕ ಕೃತಿಯಾಗಿ ಬರೆದಿರುವುದು ದಾಸರ ಮನಸ್ಸಿನಲ್ಲಿದೆ. ಹಿಂದಿನ ಇಂಥ ಕಾವ್ಯಗಳಲ್ಲಿ ಬರುವ ವರ್ಣನೆಗಳಲ್ಲಿ ಕೆಲವನ್ನಾದರೂ ತಂದು ಆ ಬಗೆಯ ಕೃತಿಸ್ವರೂಪವನ್ನು ಸಾಧಿಸುವುದು ದಾಸರ ಉದ್ದೇಶವಾಗಿರಬೇಕು. ಕುಬೇರನ ಮೇಲಿನ ಯುದ್ಧಪ್ರಸಂಗದಲ್ಲಿ ವೀರರಸಕ್ಕೆ ಅವಕಾಶವಿದೆ. ಅಷ್ಟೇ ಮುಖ್ಯವಾದ ಇನ್ನೊಂದು ರಸ ಶೃಂಗಾರ. ಅದಕ್ಕೆ ಕಾವ್ಯದಲ್ಲಿ ಹೇಗಾದರೂ ಎಡೆಮಾಡಿಕೊಟ್ಟರೆ ವೀರಶೃಂಗಾರಗಳೆರಡನ್ನೂ ಒಳಗೊಂಡು ಕಾವ್ಯ ಜನಕ್ಕೆ ಹೆಚ್ಚು ಸಮೀಪವಾದೀತು ಎಂದು ಅವರ ವಿಚಾರವಿದ್ದರೂ ಇರಬಹುದು.

ತಿಮ್ಮಪ್ಪದಾಸರ ಇತರ ಕಲವು ಕೃತಿಗಳಲ್ಲಿ ಕಾಣುವ ಭಾಗವತ ಮನೋಧರ್ಮ ಈ ಕೃತಿಯಲ್ಲೂ ವಿಶೇಷವಾಗಿ ವ್ಯಕ್ತವಾಗಿದೆ. ಕೃತಿಗೆ ಅವರು ಆಯ್ದು

ಕೊಂಡ ವಸ್ತುವೇ ಪರಮ ಭಾಗವತ ಶಿರೋಮಣಿಯ ಕಥೆ. ಇದರ ಜೊತೆಗೆ ಕಥೆಯಲ್ಲಿ ಎಲ್ಲ ಅವಕಾಶ ಸಿಕ್ಕಿದರೂ ಅಲ್ಲಿ ಅವರು ಹರಿಸ್ತುತಿಗೆ ತೊಡಗುವುದು ಕಾಣುತ್ತದೆ. ಮೂಲದಲ್ಲಿ ವಿಷ್ಣುವಿನ ಸ್ತೋತ್ರ ಬರುವುದು ಒಂದೇ ಕಡೆ; ತನ್ನೆದುರು ನಿಂತ ಭಗವಂತನನ್ನು ಧ್ರುವ ಸ್ತೋತ್ರಮಾಡುವಲ್ಲಿ ಅಲ್ಲಿ ಕೂಡ ಅದು ಭಕ್ತಿಪ್ರಧಾನ ವಾದ, ಈಶ್ವರನ ವಿರಾಟ್‌ಸ್ವರೂಪದ ವರ್ಣನೆಯಾಗಿದೆ. ತಿಮ್ಮಪ್ಪದಾಸರು ಮಾತ್ರ (ನಷ್ಟವಾದ ಗರಿಗಳಲ್ಲಿ ಇರಬಹುದಾದ ಭಾಗಗಳನ್ನು ಬಿಟ್ಟು) ಸುಮಾರು ಐದು ಕಡೆ ಭಾವಪೂರ್ಣವಾಗಿ ಹರಿಮಹಿಮೆ ಕರುಣೆಗಳನ್ನು ಸ್ತುತಿಸುವುದು ಕಾಣು ತ್ತದೆ. ಸುನೀತಿ ಧ್ರುವನನ್ನು ತಪಸ್ಸಿಗೆ ಕಳಿಸಿಕೊಡುವ ಮುನ್ನ ಭಗವಂತ ಎಂಥ ದಯಾಘನನೆಂದು ಅವನಿಗೆ ತಿಳಿಸುವಲ್ಲಿ ದೀರ್ಘವಾದ ಹರಿನಾಮಕಥನವಿದೆ. ನಾರದ ಧ್ರುವನಿಗೆ ಭಗವಂತನನ್ನು ಒಲಿಸಿಕೊಳ್ಳುವ ಪರಿಯನ್ನು ಬೋಧಿಸುವಾಗ ಧ್ರುವನಿಗೆ ಪ್ರತ್ಯಕ್ಷನಾದಾಗ, ಧ್ರುವ ತಪಸ್ಸು ಮುಗಿಸಿ ಊರಿಗೆ ಹಿಂತಿರುಗುವಾಗ ಯಕ್ಷಸೈನ್ಯದ ಮಾಯೆಯನ್ನು ಭೇದಿಸಲು ನಾರಾಯಣಾಸ್ತ್ರ ತೊಡುವಾಗ ಹರಿ ಕೀರ್ತನೆಗೆ ದಾಸರು ಅವಕಾಶ ಮಾಡಿಕೊಂಡಿದ್ದಾರೆ. ಅವರಿಗೆ ಧ್ರುವಚರಿತ್ರೆ ಒಂದು ಕಾವ್ಯವೆನ್ನುವುದಕ್ಕಿಂತ ಹರಿನಾಮಸ್ತುತಿಗೆ ಹೇರಳ ಅವಕಾಶಮಾಡಿ ಕೊಡುವ ಭಾಗವತ ಕಥೆ ಎನ್ನುವುದೇ ಮುಖ್ಯವಾಗಿರುವುದು ಒಟ್ಟು ಕೃತಿಯನ್ನು ಗಮನಿಸಿದಾಗ ಕಾಣುತ್ತದೆ. ಇಲ್ಲಿ ಕೂಡ ದಾಸರ ದೃಷ್ಟಿ ಜ್ಞಾನಕ್ಕಿಂತ ಹೆಚ್ಚು ಭಕ್ತಿಯ ಕಡೆಗೆ ಓಲುವಂಥದು. ಹಾಗೇದೇ ಮೂಲದಲ್ಲಿ ಧ್ರುವ ನಾರಾಯಣ ನನ್ನು ಕುರಿತು ಮಾಡುವ ಸ್ತೋತ್ರ ಜೀವ, ಈಶ್ವರ, ಸೃಷ್ಟಿ, ಮಾಯೆ ಇವುಗಳನ್ನೆಲ್ಲ ಒಳಗೊಳ್ಳುವ ಒಂದು ದಾರ್ಶನಿಕ ನಿರೂಪಣೆಯಾಗಿದ್ದರೆ ದಾಸರಲ್ಲಿ ಅದು ಆರ್ತ ಭಕ್ತನೊಬ್ಬನ ಕಳಕಳಿಯ ಪ್ರಾರ್ಥನೆಯಾಗಿದೆ. ಸುನೀತಿ ಧ್ರುವನನ್ನು ಸಂತೈಸುತ್ತ

ಒಂದೆಲೆ ಒಂದೆ ಕುಸುಮ ಒಂದೆ ಫಲ ಪತ್ರ
ಕಂದ ಕೇಳಣುಜಲವನ್ನು
ಇಂದಿರಾಪತಿಯೆ ಕೋ ಎಂದು ಭಕ್ತಿಯೊಳೀಯ
ಲ್ಬಂದು ಹಿಗ್ಗುತ ಕೊಂಬ ಮಗನೆ

ಮರೆಯ ಹೊಕ್ಕೆನು ನಿನ್ನನೆಂದೊಮ್ಮೆ ಮನದೊಳು
ಸ್ಮರಿಸಲು ಶ್ರೀ ವಾಸುದೇವ
ಕರುವನರಸುವೆಳೆಗಂದಿಯ ತೆರದಲಿ
ಬರುವ ನಿನ್ನೆಡೆಗೆ ಕೇಳ್ಮಗನೇ

ಇಂದಿರೆ ವೈಕುಂಠ ಚಕ್ರ ಶಂಖವು ಗದೆ
ಯಂದವಾಗಿರುವ ಕೌಸ್ತುಭವು
ಒಂದಿರದಿರಲು ಸಹಿಸುವನು ಭಕ್ತರ—
ನೊಂದು ಗಳಿಗೆ ಕಾಣದಿರನು

ಎಂದು ಹೇಳುತ್ತಾಳೆ. ಈ ಮಾತುಗಳೆಲ್ಲ ತಿಮ್ಮಪ್ಪದಾಸರಿಗೆ ಭಕ್ತಿಮಾರ್ಗದ ಕಡೆ ಗಿರುವ ಒಲವನ್ನು ಸೂಚಿಸುತ್ತದೆ.

ದಾಸರಲ್ಲಿ ಚಾಟು ವಿಟ್ಠಲನಾಥನ ಪ್ರೌಢಿಮೆಯಾಗಲೀ ಅವನ ನುಡಿಗಾರಿಕೆಯ ಸಹಜ ಓಘವಾಗಲೀ ಇಲ್ಲ. ಕೆಲವು ಕಡೆ ಪ್ರಾಸಕ್ಕಾಗಿ ಮಾತನ್ನು ತರುವುದೂ, ಪ್ರಾಸಪಾಲನೆಯ ಭರದಲ್ಲಿ ಮಾತಿನ ಹೆಣಿಗೆ ಅಸಹಜವಾಗುವುದೂ ಕಾಣುತ್ತದೆ. ಆದರೆ ತೀರ ಸರಳವಾಗಿರುತ್ತಲೇ ಈ ಕೃತಿಯ ಕೆಲವು ಭಾಗಗಳು ಮನಸ್ಸನ್ನು ತಾಗುತ್ತವೆ, ತಿಮ್ಮಪ್ಪದಾಸರಿಗೆ ಮುಖ್ಯವಾದುದು ಹರಿಭಕ್ತಿ. ಜನದ ಮನದಲ್ಲಿ ಅದನ್ನು ಉದ್ದೀಪಿಸುವುದು. ಧ್ರುವ ಕಥೆಯ ಸಂಬಂಧದಲ್ಲಿ ದೊರೆಯುವ ಪೂರ್ಣಪ್ರಮಾಣದ ಏಕಮೇವ ಕನ್ನಡ ಕೃತಿ ಇದು ಎನ್ನುವುದನ್ನು ನಾವು ಮರೆಯುವಂತಿಲ್ಲ. ಆ ದೃಷ್ಟಿಯಿಂದ ಇದಕ್ಕೆ ಚಾರಿತ್ರಿಕವಾದ ಪ್ರಾಮುಖ್ಯ ಸಹ ಇದೆ ಎನ್ನುವುದನ್ನು ನಾವು ಗಮನಿಸಬೇಕಾಗುತ್ತದೆ.

* * * *

ತಿಮ್ಮಪ್ಪದಾಸರ ಬರೆಹದಲ್ಲಿ ಭಾಷಾಸಂಬಂಧವಾದ ಕೆಲವು ವೈಲಕ್ಷಣ್ಯಗಳು ಕಾಣುತ್ತವೆ. ಅವರು ಬಳಸುವ ಕೆಲವು ಸಂಧಿ ಸಮಾಸಗಳು ಉಳಿದವರಲ್ಲಿ ಕಾಣಬರದಂಥವು, ಆಡುಮಾತಿನಲ್ಲಿ ಕಾಣುವ ವೈಲಕ್ಷಣ್ಯಗಳನ್ನು ಅನುಸರಿಸಿದ್ದರಿಂದ ರೂಪುಗೊಂಡಂಥವು. ವಕಾರವನ್ನು ಬಕಾರವೆಂಬಂತೆ, ಯಕಾರವನ್ನು ಎಕಾರವೆಂಬಂತೆ ಸ್ವೀಕರಿಸಿ ಸಂಧಿಮಾಡುವುದು ಅವರಲ್ಲಿ ಸಾಮಾನ್ಯ. ಉದಾಹರಣೆಗೆ: ನನಗೊರವಿತ್ತಂಥ ಪರಿಯ, ದೇಶದೊಲ್ಲಭ, ವರತರ ಮಹಿಷವನೆಮನಡರಿಯೆ ಬಂದ, ಹೊರಡಲೆತ್ನವ ಮಾಡಿ, ತಪಸಿಗೆತ್ನಗೈದ—ಮೊದಲಾದವು. ಹೀಗೆಯೇ ವ್ಯಾಕರಣ ನಿಯಮಗಳನ್ನು ಬದಿಗೊತ್ತಿದ ಸಮಾಸರಚನೆಗಳೂ ಅವರಲ್ಲಿ ಕಾಣುತ್ತವೆ. ದೃಷ್ಟಿಗೊನೆಶರ (ಕಡೆಗಣ್ಣ ನೋಟದ ಬಾಣ), ಕೆಂಡವರ್ಷ (ಕೆಂಡದ ಮಳೆ), ಸ್ತ್ರೀ ಪಾಣಿಗಡಕ (ಹೆಣ್ಣಿನ ಕೈಯೊಳಗೆ ಸಿಕ್ಕವನು), ಅಡಿಯುಗ್ಮ ಇತ್ಯಾದಿ ಇದಕ್ಕೆ ನಿದರ್ಶನ. ಛಂದೋನಿರ್ವಹಣೆಯ ಸಲುವಾಗಿ ಅವರು ಉತ್ತಾನಪಾದ ರಾಯನನ್ನು ಕೆಲವು ಕಡೆ ಉತ್ತಾನ ಪದ ರಾಯನನ್ನಾಗಿ ಮಾಡುವುದುಂಟು; ಬಣ್ಣಿಪನು ಎಂಬ ಪದದ ಸಾಮ್ಯದ ಮೇಲೆ ಗಣ್ಣಿಪನು (ಗಣಿಸುವನು) ಎಂಬ ಶಬ್ದ ರೂಪವನ್ನು ಮಾಡಿಬಿಡುವುದೂ ಉಂಟು. ಆಡುಮಾತಿನಲ್ಲಷ್ಟೇ ಬಳಕೆಯಲ್ಲಿದ್ದ

ಶಿಸ್ತು, ಫೌಜು ಮೊದಲಾದ ಅನ್ಯಭಾಷಾ ಶಬ್ದಗಳನ್ನೂ ಅವರು ಬಳಸುತ್ತಾರೆ. ಹಾಗೆಯೇ ಆಡ್ದ, ಮಾಡ್ದ, ಕೂಡ್ಲೆ ಎನ್ನುವಂಥ ರೂಪಗಳನ್ನೂ ಹಿಂಜರಿಕೆಯಿಲ್ಲದೆ ತಂದುಬಿಡುತ್ತಾರೆ. ಡೋಳು (ಡೋಲು). ಒಳಯಿಂಕೆ (ಒಳಕ್ಕೆ) ಮೊದಲಾದ ರೂಪಗಳ ಜೊತೆಗೆ ಆದಿಯ ಪಕಾರ ಹಾಗೆಯೇ ಇರುವ ಮತ್ತು ಹಕಾರವಾಗಿ ತಿರುಗಿರುವ ಎರಡು ರೂಪಗಳನ್ನೂ ಬಳಸಿಬಿಡುತ್ತಾರೆ. ಇವೆಲ್ಲ ಸಾಧುವೆಂದು ಪರಿಗಣಿಸಬೇಕಾಗಿಲ್ಲವಾದರೂ ದಾಸರ ಭಾಷಾಶೈಲಿಯ ಒಂದು ವೈಲಕ್ಷಣ್ಯವೆಂದು ಮನ್ನಿಸಬೇಕಾಗುತ್ತದೆ.

* * * *

ನಮಗೆ ದೊರೆತಿರುವ ತಿಮ್ಮಪ್ಪದಾಸರ ಧ್ರುವಚರಿತ್ರೆಯ ಪ್ರತಿ ಒಂದ ಮಾತ್ರ. ಒಟ್ಟು ನೂರ ಹತ್ತು ಓಲೆಗರಿಗಳಿದ್ದ ಹಸ್ತಪ್ರತಿ ಇದು. ಅವುಗಳಲ್ಲಿ ಈಗ ಉಳಿದಿರುವುದು ತೊಂಬತ್ತಾರು ಓಲೆಗಳು, ಎಂದರೆ ಹದಿನಾಲ್ಕು ಓಲೆಗಳು ನಷ್ಟವಾಗಿವೆ. ಇರುವ ಗರಿಗಳಲ್ಲಿ ಕೆಲವು ತುದಿಯಲ್ಲಿ ಕೊಂಚ ಮಟ್ಟಿಗೆ ತ್ರುಟಿತ ವಾಗಿವೆ. ಕಳೆದುಹೋಗಿರುವ ಹದಿನಾಲ್ಕು ಓಲೆಗರಿಗಳಲ್ಲಿ ಐದು ಓಲೆಗಳು ಸಂಧಿಗಳ ನಡುವೆ ಅಲ್ಲಲ್ಲಿ ಬರಬೇಕಾದವಾಗಿದ್ದರೆ ಉಳಿದ ಒಂಬತ್ತು ಗರಿಗಳು ಕೃತಿಯ ಕೊನೆಯಲ್ಲಿ ಒಟ್ಟಿಗೆ ಎರಡು ಮೂರು ನಾಲ್ಕರಂತೆ ನಷ್ಟವಾಗಿವೆ. ಅವುಗಳ ವಿವರ ಕೆಳಕಂಡಂತೆ ಇದೆ.

| ನಷ್ಟವಾಗಿರುವ ಗರಿಯ ಸಂಖ್ಯೆ | ಬಿಟ್ಟುಹೋಗಿರಬಹುದಾದ ಕಥಾಭಾಗ |
|---|---|
| 31 | ಧ್ರುವ ಕಾಡಿಗೆಂದು ಹೋಗುತ್ತಿರುವಾಗ ಪುರಜನರು ಮಾತನಾಡಿಕೊಳ್ಳುವ ಭಾಗ 9 ಪದ್ಯ ಬಿಟ್ಟು ಹೋಗಿವೆ. |
| 54 | ಗಣಿಕೆಯರ ಕೇರಿಯ ವರ್ಣನೆಗೆ ಸಂಬಂಧಿಸಿದ ಭಾಗ. 9 ಪದ್ಯ ಬಿಟ್ಟುಹೋಗಿವೆ. |
| 58 | ನಾರದ ಮತ್ತು ಉತ್ತಾನಪಾದರಾಯರ ಸಂಭಾಷಣೆ 8 ಪದ್ಯ ನಷ್ಟವಾಗಿವೆ, |
| 89 | ಧ್ರುವನ ಸೇನೆ ಕುಬೇರನ ನಗರದ ಹೊರಗೆ ಬೀಡು ಬಿಟ್ಟಿರುವಾಗ ನೀರು ತೆಗೆದುಕೊಂಡು ಹೋಗಲು ಬಂದ ನಾರಿಯರ ವರ್ಣನೆ. 10 ಪದ್ಯ ಬಿಟ್ಟುಹೋಗಿವೆ. |

92, 93, 94, 95 ಯುದ್ಧಾರಂಭದಲ್ಲಿ ಧ್ರುವನು ಕುಬೇರನ ಸೇನೆಯನ್ನು ಹೊಡೆದೋಡಿಸಿದ ಭಾಗ. ಸುಮಾರು 36 ಪದ್ಯ ನಷ್ಟವಾಗಿವೆ.

97 ಸೋತು ಬಂದ ಸೇನೆಯ ಮೇಲೆ ಕುಬೇರ ಕೋಪಿಸಿ ಕೊಂಡ ನಂತರದ ಮುಂದಿನ ಭಾಗ, 9 ಪದ್ಯಗಳು ಇಲ್ಲ.

104, 105 ಯಕ್ಷರ ಜೊತೆ ಯುದ್ಧ ಮುಗಿದ ಮೇಲಿನ ಭಾಗ ಧ್ರುವನಿಗೆ ಮಕ್ಕಳಾದುದು, ಅವನ ರಾಜ್ಯಭಾರ ಇತ್ಯಾದಿ.

107, 108, 109 ಧ್ರುವಯಜ್ಞಮಾಡಿದುದು, ವೈರಾಗ್ಯಮುಖಿಸಾದುದು, ಬದರಿಕಾಶ್ರಮಕ್ಕೆ ತೆರಳಿ ತಪಸ್ಸುಮಾಡಿ ಶಶರೀರನಾಗಿ ಪರಮಪದಕ್ಕೆ ಹೋದುದನ್ನು ಹೇಳುವ ಭಾಗ ಸುಮಾರು 27 ಪದ್ಯ ಕಳೆದಿವೆ

ಒಟ್ಟು 110 ಗರಿಗಳಿಂದ ಇದ್ದಿರಬಹುದಾದ ಪದ್ಯಗಳ ಸಂಖ್ಯೆ ಸುಮಾರು 1010 ಅಥವಾ 1020 ರ ಒಳಗೆ ಎಂದಿಟ್ಟುಕೊಳ್ಳಬಹುದು. ಈಗ ಇರುವ ಪದ್ಯಗಳ ಸಂಖ್ಯೆ 982 ನಷ್ಟವಾಗಿರುವ ಪದ್ಯಗಳ ಸಂಖ್ಯೆ ಸುಮಾರು 130 ಇರಬಹುದು

* * * +

ಹಸ್ತಪ್ರತಿಯಲ್ಲಿ ಕಾಗುಣಿತಕ್ಕೆ ಸಂಬಂಧಿಸಿದಂತೆ ಅನೇಕ ವೈಲಕ್ಷಣ್ಯಗಳು ಕಾಣಸಿಗುತ್ತವೆ. ಇವುಗಳಲ್ಲಿ ಕೆಲವು ಹಿಂದಿನ ಎಲ್ಲ ಪದ್ಯಗಳ ಪ್ರತಿಲೇಖನ ಕಾರ್ಯದಲ್ಲಿಯೂ ದೊರೆಯುವ ಸಾಮಾನ್ಯ ವಿಧಾನಕ್ಕೆ ಸಂಬಂಧಿಸಿದವು. ಮತ್ತೆ ಕೆಲವು ಇಲ್ಲಿನ ಪದ್ಯಗಳನ್ನು ಅಂಶಲಯದ ಧಾಟಿಯಲ್ಲಿ ಹೇಳಿಕೊಂಡು ಬರೆದಿರುವುದ ರಿಂದ ಆ ಧಾಟಿಗೆ ಒಗ್ಗಿಸುವ ಸಲುವಾಗಿ ಉಂಟಾದಂಥವು. ಇನ್ನು ಕೆಲವು ಉಚ್ಚಾರಣೆಯನ್ನು ಅನುಸರಿಸಿ ಬರೆದುದರಿಂದ ಉಂಟಾದವು. ಕೆಲವು ನಿದರ್ಶನಗಳನ್ನು ಇಲ್ಲಿ ಕೊಡಬಹುದು.

1. ಪದಾದಿಯ ಸ್ವರಕ್ಕೆ ಯ ಮತ್ತು ವ ವ್ಯಂಜನಗಳು ಬೆರೆತು ಬರುವುದು ; ಯರಡೇಳು (ಎರಡೇಳು), ಎಂತೆಂನುತರಿಯಾದೆ (ಎಂತೆನ್ನುತರಿಯದೆ) ಯೆಂಂನನು (ಎನ್ನನು), ಯಿಾ ವಿಧದಲಿ (ಈ ವಿಧದಲಿ), ವಾಲಗ (ಓಲಗ) ವೋತು (ಓತು).

2. ಪದಮಧ್ಯ ಮತ್ತು ಪದಾಂತ್ಯಗಳಲ್ಲಿ ವಕಾರವ್ಯಂಜನ ಲೋಪವಾಗಿ ಅದರ ಜೊತೆಯಿದ್ದ ಸ್ವರ ಮಾತ್ರ ಉಳಿದಿರವುದು.
   ಗೋಉಗಳು (ಗೋವುಗಳು), ಸತತಾಉ (ಸತತವು), ತಾಉ (ತಾವು)

3. ದೀರ್ಘಾಕ್ಷರಗಳನ್ನು ಹ್ರಸ್ವವಾಗಿ ಬರೆಯುವುದು :
   ರೊಧಿಸುಉದ (ರೋದಿಸುವುದ), ಯೊಚನೆ (ಯೋಚನೆ) ಮೊದ ಧೊಳು (ಮೋದದೊಳು), ಬರದೊದಿ (ಬರದೋದಿ).

4 ಎಕಾರಕ್ಕೆ ಅಕಾರ ಬರೆಯುವುದು :
   ಯಲ್ಲರ (ಎಲ್ಲರ), ಯಂನನು (ಎನ್ನನು), ಯೇನ (ಏನ).

5. ಋಕಾರಕ್ಕೆ ರಕಾರ ಬರೆಯುವುದು :
   ನ್ರುಪ (ನೃಪ), ಮ್ರುಗ (ಮೃಗ)

6. ಅಂಶಲಯದ ಹಾಡಿನ ಧಾಟಿಗೆ ಹೊಂದಿಸಲು ಹ್ರಸ್ವವನ್ನು ದೀರ್ಘವಾಗಿ ಬರೆಯುವುದು :
   ಸರಸೀಜ (ಸರಸಿಜ), ಅಗಣೀತ (ಅಗಣಿತ).

7. ಅದೇ ಕಾರಣಕ್ಕಾಗಿ ಎರಡು ಮತ್ತು ನಾಲ್ಕನೆಯ ಪಾದಗಳ ಅಂತ್ಯದಲ್ಲಿ ಬರುವ ಹ್ರಸ್ವ ಅಕ್ಷರವನ್ನು ದೀರ್ಘಾಕ್ಷರವಾಗಿ ಬರೆಯುವುದು.
   ಸಾಧನಊ (ಸಾಧನವು), ಮಾರ್ಗವನೂ (ಮಾರ್ಗವನು),
   ತಾನಹುದೂ (ತಾನಹುದು).

8. ವರ್ಗಪಂಚಮಗಳು ಸಂಯುಕ್ತಾಕ್ಷರವಾಗಿದ್ದಾಗ ಅನುಸ್ವಾರವನ್ನು ಬಳಸುವುದು,
   ನಿಂನಿಂದ (ನಿನ್ನಿಂದ), ಮಂನ್ನಿಸು (ಮನ್ನಿಸು), ತಂಮೊಳು (ತಮ್ಮೊಳು)

9 ಅಲ್ಪಪ್ರಾಣಕ್ಕೆ ಮಹಾಪ್ರಾಣ ಬರೆಯುವುದು
   ತಂಘಾಳಿ (ತಂಗಾಳಿ), ಧೊರೆ (ದೊರೆ)

10 ದ್ವಿತ್ವಮಹಾಪ್ರಾಣಕ್ಕೆ ಸರಳ ಮಹಾಪ್ರಾಣ ಬಳಸುವುದು :
   ಸಿಧ (ಸಿದ್ಧ), ಬುಧಿ (ಬುದ್ಧಿ)

11. ತಪ್ಪು ಕಾಗುಣಿತ ಬಳಸುವುದು :
   ಆಛೆ, (ಆಚೆ), ಜಲ್ಮ (ಜನ್ಮ), ಪೂರ್ನ (ಪೂರ್ಣ), ಬ್ರಂಹ (ಬ್ರಹ್ಮ) ಮಘ್ನ (ಮಗ್ನ).

ಧ್ರುವಚರಿತ್ರೆಯ ಹಸ್ತಪ್ರತಿಯನ್ನು ಕೊಟ್ಟು ಅದನ್ನು ಪ್ರಕಟನೆಗೆ ಸಿದ್ಧಮಾಡಿಕೊಡುವಂತೆ ನನಗೆ ಹೇಳಿದವರು ಹಿರಿಯರಾದ ಶ್ರೀ ಎಂ. ವಿ. ಸೀತಾರಾಮಯ್ಯನವರು. ತಾವೇ ಇನ್ನೂ ಅಚ್ಚುಕಟ್ಟಾಗಿ ಮಾಡಬಹುದಾಗಿದ್ದ ಕೆಲಸವೊಂದನ್ನು ನನಗೆ ವಹಿಸುವ ಮೂಲಕ ತೋರಿಸಿದ ವಿಶ್ವಾಸಕ್ಕಾಗಿ ನಾನು ಅವರಿಗೆ ಆಭಾರಿಯಾಗಿದ್ದೇನೆ. ಈ ಕೆಲಸ ಮಾಡುವಾಗ ನನಗೆ ಬೇಕಾದ ಎಲ್ಲ ನೆರವು ನೀಡಿದ ನನ್ನ ಸಹೋದ್ಯೋಗಿ ಶ್ರೀ ಎಸ್. ಶಿವಣ್ಣನವರ ಸಹಾಯವನ್ನು ನಾನು ವಿಶ್ವಾಸಪೂರ್ವಕ ಸ್ಮರಿಸುತ್ತೇನೆ.

ಧ್ರುವಚರಿತ್ರೆಯನ್ನು ಪ್ರಕಟಿಸುತ್ತಿರುವ ಬಿ. ಎಂ. ಶ್ರೀ ಸ್ಮಾರಕ ಪ್ರತಿಷ್ಠಾನಕ್ಕೆ ನನ್ನ ಕೃತಜ್ಞತೆಗಳು. ಪುಸ್ತಕವನ್ನು ಸುಂದರವಾಗಿ ಮುದ್ರಿಸಿರುವ ಅಶ್ವಥ್ ಪ್ರಿಂಟರ್ಸ್ ಸಂಸ್ಥೆಯ ಮಾಲೀಕರಾದ ಶ್ರೀ ದಿವಾಕರರಿಗೂ ಅಲ್ಲಿಯ ಕೆಲಸಗಾರರಿಗೂ ಮತ್ತು ರಕ್ಷಾ ಪತ್ರ ರಚಿಸಿಕೊಟ್ಟ ಶ್ರೀ ರಾ ಸೂರಿಯವರಿಗೂ ನನ್ನ ವಂದನೆಗಳು.

**ಎನ್. ಎಸ್. ಲಕ್ಷ್ಮೀನಾರಾಯಣಭಟ್ಟ**

೨೨೬೩, ೨೨ನೆಯ ಕ್ರಾಸ್,
ಬನಶಂಕರಿ ೨ನೆಯ ಸ್ಟೇಜ್,
ಬೆಂಗಳೂರು–೫೬೦ ೦೭೦

## ಅನುಕ್ರಮಣಿಕೆ

# ಪೀಠಿಕೆ

ಕಂಸ ॥ ಶ್ರೀ ವೆಂಕಟೇಶ ಚರಣವ
ಭಾವಿಸಿ ಮನದೊಳಗೆ ತರುಣ ಧ್ರುವನತಿ ಭಕ್ತಿಯೊ
ಳಾವೈಶ್ವರ್ಯವ ಪಡೆದನೊ
ನಾವುಸುರುವುದದನೆನೆ ಜನರಿದ ಲಾಲಿಪುದು

ಸಾಂಗತ್ಯ ॥ ಶ್ರೀರಮಣನೆ ಕೃಷ್ಣಾಶ್ರಿತ ಜನೋದ್ಧಾರಕ
ವಾರಿಜಾಸನ ವಂದ್ಯಪಾದ
ನೀರಜಾಂಬಕ ಚಿಕ್ಕನಾಗ ನಗರವಾಸಿ
ನೀ ರಕ್ಷಿಸೆನ್ನ ವೆಂಕಟನೆ ೧

ಇಂದಿರೆ ಲಕ್ಷ್ಮೀವೆಂಕಟನರಸಿಯೆ ಸುರ
ವೃಂದಸೇವಿತ ಪಾದವಿದ್ಯೆ
ಕುಂದಕುಟ್ಮ[ಲ ಸನ್ನಿಭಶುಭ್ರ ರದ]ನೆ ನೀ
ನಿಂದು ಸಲಹು ಮತಿಯಿತ್ತು ೨

ಗೌರೀ[ಸಂತ]ನೆ ದೇವ ವಾರಣವದನನೆ
ವಾರಿಜಸಖ ಶತತೇಜ
ನಾರದಮುನಿ[ಸಂ]ನುತಪಾದ ಮತಿಯಿತ್ತು
ನೀ ರಕ್ಷಿಸೆನ್ನ ಗಣನಾಥ ೩

ವಾಣಿ ಶಾರದೆಯೆ ಗೀರ್ವಾಣಿ ಪಂಕಜಸುತ
ರಾಣಿ ಕೋಕಿಲ ಸಮವಾಣಿ
ಪಾಣಿಯೊಳ್ ಪಿಡಿದ ಸುವೀಣೆ ಭಾರತಿ ಫಣಿ
ವೇಣಿ ಜಿಹ್ವೆಗೆ ಬಾ ಕಲ್ಯಾಣಿ ೪

ಶಂಕರ ಶರ್ವ ಮಹೇಶ್ವರ ಮಾರನಾ
ಶಂಕರ ಪ್ರಮಥಾಧಿನಾಥ
ಪಂಕಜರಿಪುಜೂಟ ರಾಮೇಶ ನೀ ಮತಿ
ಯಂ ಕರುಣಿಸು ಕಾಲಕಾಲ ೫

ಗಿರಿಜೆ ಜಗನ್ಮಾತೆ ಕರುಣಾಸಾಗರೆ ಶಿವ
ನರಸಿಯೆ ಭಜಕಸುಪ್ರಿಯೆಯೆ
ಶರಣುಹೊಕ್ಕೆನು ನಿನ್ನ ಚರಣಪಂಕಜವ ನೀ
ಕರುಣಿಸು ಮತಿಯನು ದಯದಿ ೬

ಗುರುವೆ ನಂಬಿದೆ ನಿನ್ನ ಚರಣಕಮಲವನ್ನು
ಕರುಣದಿಂದೆನ್ನ ಚಿತ್ತದೊಳು
ನಿರುತ ನೆಲಸಿ ಜ್ಞಾನವರಿವಂತೆ ಪ್ರೇರಿಸು
ಪರಮಪಾವನ ವಾಸುದೇವ ೭

ಶ್ರೀರಾಮಚರಣಸೇವಕ ವಾಯುತನಯನೆ
ವೀರ ನಂಬಿದೆ ನಿನ್ನ ಪದವ
ವಾರಿಧಿಲಂಘನ ದಕ್ಷ ದಾನವಶಿಕ್ಷ
ನೀ ರಕ್ಷಿಸೆನ್ನನು ಹನುಮ ೮

### ಮತ್ಸ್ಯಾವತಾರ

ಹನ್ನೆರಡನೆಯ ಯೋಗದ ನಾಮನಯ್ಯನ
ಉನ್ನತ ದೇಹದಜ್ಞನಿಗೆ
ಮನ್ನಣೆಯಿಂದ ವೇದವನಿತ್ತ ಮುನಿಕುಲ
ಸನ್ನುತನಡಿಗೆ ವಂದಿಸುವೆ[1] ೯

---

1 ಈ ಪದ್ಯದ ಆರಂಭದಲ್ಲಿ ಮತ್ಸ್ಯ ಎಂದಿದೆ. ಇದು ಮತ್ಸ್ಯಾವತಾರವನ್ನು ಸೂಚಿಸುತ್ತದೆ. ಇಲ್ಲಿಂದ ಮುಂದಿನ ಒಂಬತ್ತು ಪದ್ಯಗಳ ಆರಂಭದಲ್ಲಿ ಕವಿ ಸ್ತುತಿಸಿರುವ ಆಯಾಯ ಅವತಾರಗಳ ಹೆಸರಿವೆ.

## ಕೂರ್ಮಾವತಾರ

ನಾರಿಯು ಕುಚವಗಿರಿಯು ಮತ್ತಾಕೆಯು ಪತಿ
ಯಾರಂಭೆಗೆ ಬೆಚ್ಚಿ ಕಣ್ಣ
ವಾರಿಯು ಪಡೆದಸಯ್ಯಗೆ ಹೆದರುವವನು
ದ್ಧಾರಗೈದವನಿಗೊಂದಿಸುವೆ ೧೦

## ವರಾಹಾವತಾರ

ಹಗಲಿಗೊಡೆಯನಾದನ ವಂಶೋದ್ಭವನ ತಾ
.. . .. ಯನು
ನೆಗಹಿ ಕನಕದಂತೆ ಹೊಳೆಯುವ ಕಣ್ಣುಳ್ಳ
[ಮೃಗವರಾಹ ನಿಗೊ]ಂದಿಸುವೆ ೨೦

## ನರಸಿಂಹಾವತಾರ

ನರಸ ಜನಕ ... ....... . ಕಂಡು
ಮೊರೆದು ತಿಂಬದರಂತೆ ಮುಖವ
ಧರಿಸಿ ದಾನವನ [ಕರುಳ] ತೆಗೆಧಸ್ಥಳಿಯು
ಪೊರೆದ ಪಾವನನಿಗೊಂದಿಸುವೆ

## ವಾಮನಾವತಾರ

ಎರಡೇಳು ಗ್ರಹಗಳ ಮಧ್ಯದೊಳ್ ಮೂರನೆ
ಪರಮಪುರುಷನ ಮಾತೆಯನು
ನೆರೆಮೇಲೋಕವನು ಸಹಿತಲಳೆದಂಥ ಶ್ರೀ
ವರನ ಪಾದಗಳಿಗೊಂದಿಸುವೆ ೧೩

## ಪರಶುರಾಮಾವತಾರ

ಭುಜಗಳಿಂ ಪುಟ್ಟಿದವರ ಕೊಂದು ಮುಖದಿಂದ
ನಿಜವಾಗಿ ಜನಿಸಿದವರಿಗೆ
ಋಜುವಾದ ಸಕಲ ಭೂಮಿಯನಿತ್ತು ಪೊರೆದಂಥ
ಭಜಕಪಾಲಕನಿಗೊಂದಿಸುವೆ ೧೪

## ರಾಮಾವತಾರ

ರೂಪುದೋರದನ ಮಗನ ತಮ್ಮನಯ್ಯಗೆ
ಶಾಪವಿತ್ತಂಥ ಮುನಿಪನ
ಕೋಪದಿಂದರೆಯಾದಳನು ಪದನೋಂಕಿನಿಂ
ಕಾಪಾಡಿದವನಿಗೊಂದಿಸುವೆ ೧೫

## ಕೃಷ್ಣಾವತಾರ

ಎರಡು ನಾಲಿಗೆಯುಳ್ಳನ ತಿಂಬನಣ್ಣನ
ಪೊರೆವನ ಸುತನ ತಂಗಿಯನು
ಪರಮಪಾವನಳ ಮಾಡಿಯೆ ಪಾದತುಳಿದಂಥ
ಸರಸಿಜನಾಭಗೊಂದಿಸುವೆ ೧೬

## ಬೌದ್ಧಾವತಾರ

ದುಷ್ಟರನೆಲ್ಲರ ಸದೆದು ಸುರರ ಸ್ವಸ್ಥ
ವಿಟ್ಟುಬಿಡುವೆನೆಂದು ತಾನು
ಉಟ್ಟಬಟ್ಟೆಯನು ತ್ಯಾಗವ ಮಾಡಿ ನಿಂದಂಥ
ದಿಟ್ಟ ಬುದ್ಧನಿಗೊಂದಿಸುವೆ ೧೭

## ಕಲ್ಕ್ಯಾವತಾರ

ತುರಗವನೇರಿ ಸ್ವಾಜ್ಯವ ಪಿಡಿದವನಿಗೆ
ಹೊರೆಯಾದವರನು ಸಂಹರಿಸಿ
ಚರಣಸೇವಕರನು ದಯದಿ ರಕ್ಷಿಸುವಂಥ
ಪರಮ ಕಲ್ಕಿಗೆ ನಾನೊಂದಿಸುವೆ ೧೮

ಕಣ್ಣುಬಟ್ಟೆಗಪೆತ್ತಿ ಕ್ಷಮೆಯ ತಾಳಿಯೆ ಕರು
ಳನ್ನು ಧರಿಸಿ ಯಾಚಿಸುವನ
ಉನ್ನತಕುಲಜರ ಮನ ಗೋಪಾಲನ ಬುಧ
ನನ್ನು ಕಲ್ಕಿಯನು ಭಜಿಸುವೆ ೧೯

[1]ಮೂಗಣ್ಣನರಸಿಯ ಪಿತನ ಕಂಡರೆ ತನ
ಗಾಗದವನ ಸಖಸಖನ
ರಾಗದಾತ್ಮಜನ ತಮ್ಮನ ಹರಿವಿಡಿದಂಥ
ನಾಗೈಯನಡಿಗೆ ವಂದಿಸುವೆ ೨೦

1. ಪದ್ಯದ ಆರಂಭದಲ್ಲಿ ಅರ್ಜುನಸಾರಥಿ ಎಂದಿದೆ.

[1]ಐವರಿಗೊಲಿದವಳಯ್ಯನಪ್ಪಣೆಯುನು
ತಾ [ನೊ]ದ್ದನಣುಗನ ಶರದಿಂ
ಸಾವೆನು ಸಲಹೆಂದಳೊಡಲೊಕ್ಕರ್ಭಕನ
ನ್ನೋವಿದ ದೇವಗೊಂದಿಸುವೆ ೨೧

[2]ಕಾಲಿಲ್ಲದನ ತಮ್ಮಗಂಜುವದಂ ನಿಕ್ಕ
ಲೀಲೆಯಿಂದಲಿ ಧರಿಸಿದನ
ಬಾಲನಯ್ಯನ ತುಂಬಿಸುವುದರಿಂ ಬಂದುಬ
ರಾಲಯುಳರಸಗೊಂದಿಸುವೆ ೨೨

ವರುಷವ್ಯೆದರಲಚ್ಯುತನ ಕರುಣವ ತಾನು
ನೆರೆ ಸಂಪಾದಿಸಿದು[ಥ] ಧ್ರುವನಾ
ಚರಿತೆಯುನು ಪೊಗಳಿ [ಧನ್ಯ]ನು ನಾನಾಗುವರಿದ
ನೊರೆದೆ ಸಜ್ಜನರು ಪಾಲಿಪುದು ೨೩

ಪರಮಪಾವನ ಸುರವರವಂದ್ಯ ಕರುಣಾ ಸಾ
ಗರ ನಾರಾಯಣ ದಯದಿಂದ
ಶರಣುಪೊಕ್ಕರ ಕಾಯಲ್ ನರರೂಪ ಧರಿಸಿದ
ಗುರು ವಾಸುದೇವಗೊಂದಿಸುವೆ ೨೪

ನಿರುತವೀ ಧ್ರುವನ ಚರಿತೆಯುನು ಭಕ್ತಿಯೊಳ್
ಬರೆದೋದಿ ಕೇಳಿವ ಜನರ
ವರಚಿಕ್ಕನಾಗಪುರದ ವೆಂಕಟೇಶನು
ಪೊರೆವನು ಸುಖವಿತ್ತು ದಯದಿ ೨೫

1. ಪದ್ಯದ ಆರಂಭದಲ್ಲಿ ಪರೀಕ್ಷಿತ್ ಪಾಲಕ ಎಂದಿದೆ.
2. ಪದ್ಯದ ಆರಂಭದಲ್ಲಿ ಲಕ್ಷ್ಮೀಪತಿ ಎಂದಿದೆ.

# ಧ್ರುವನ ಜನನ

ಕೇಳೈ ಪರೀಕ್ಷಿತಯೆಂದನು ಶುಕಮುನಿ
ಲೀಲೆಯಿಂದಿದನೆ ಮೈತ್ರೇಯ
ಪೇಳಿದ ವಿದುರಗೆ ಶೌನಕಾದಿಗಳಿ ನೀ
ಪಾಲಿಸಿಯೆಂದನಾ ಸೂತ ೧

ಆದಿಯೊಳಜ ಪರಿಪಾಟಿಕೆಂಭದಿ ಬಂದ
ನಾದೇವಸುತ್ತ್ವಮಾಂಗದಲಿ
ಆವರು ಸ್ವಾಯಂಭುಮನುಶತರೂಪಿಯು
ರಾದಿತ್ಯತೇಜ ವಿಗ್ರಹರು ೨

ಸ್ವಾಯಂಭು ಮನುವಿಗೆ ಶತರೂಪಿಯೊಳು ಕಮ
ಲಾಯತನೇತ್ರರುಭಯರು
ರಾಯಪ್ರಿಯರು ಉತ್ತಾನಪಾದರೆಂತೊ
ಬಾಯತನಾಮದ ಸುತರು ೩

ಜನಿಸಿರುತಿರಲಿವರೊಳು ವಾಸುದೇವನ
ಘನಕೃಪಾ ಪಾತ್ರನಾದಂಥ
ತನಯನೋರ್ವನು ಪುಟ್ಟಿ ಮರು[ಷ]ವೈದರೊಳು ದೇ
ವನನೊಲಿಸಿದ ತಪಗೈದು ೪

ಎಲೆ ಮುನಿವರನೆ ಹ[ಸು]ಳೆಯೆಂತು ತಪಗೈದು
ಒಲಿಸಿದನ್ನೈದು ವರುಷದಾ
ಎಳೆ ಹರೆಯುದಲಿ ಶ್ರೀ ವಾಸುದೇವನ ಚೋದ್ಯ
ಬಲು ತೋರುತಿದೆ ವೇಳು ದಯದಿ ೫

ಧರೆಯೊಳಿರುವ ಜನರಿಗೆ ಜ್ಞಾನ ತಂತಾನೆ
ಬರುವುದೆಂತೆಂದು ಶ್ರೀ ಹರಿಯು
ಕರುಣದಿಂದೀಪರಿ ಋಷಿವರರೂಪನು
ಧರಿಸಿ ಬೋಧಿವನು ತಾನೈಸೆ ೬

ಲೋಕೋಪಕಾರಾರ್ಥವಾಗಿ ಸತ್ಪುರುಷರು
ಚೋಕೆಯಿಂದಚ್ಯುತ ಕಥೆಯು
ಏಕ ಮಾನದೊಳಾಲಿಸಿಯೆಂದು ಪೇಳ್ವ
ದೇ ಕರುಣೆಗಳಭಿಮತವು ೭

ದುರಿತ ಸಾಗರಕೆ ಬಡಬವೆನಿಸುವ ಹರಿ
ಚರಿತೆ ಶ್ರದ್ಧಕ್ತರ ಕಥೆಯು
ಒರೆಯಬೇಹುದು ಋಷಿವರರೆ ವಿಸ್ತರವಾಗಿ
ಕರುಣದಿಂದೆಂದ ಭೂಪಾಲ ೮

ಕೇಳೆಲೆ ರಾಜಯೆಂತೆಂದು ಶುಕನು ತಾನು
ಪೇಳಿದ ವಿಸ್ತರವಾಗಿ
ಆಲಿಪ ಜನಕಿಷ್ಟಜಾಲವ ಕರುಣಿಪ
ಶ್ರೀಲೋಲ ಧ್ರುವಗೊಲಿದುದನು ೯

ಧರೆಯೊಳಗಧಿಕ ಮಾಹಿಷ್ಮತಿಯೆಂತೆಂಬ
ಪುರವರವೊಪ್ಪಿಹುದದರ
ಸಿರಿಯ ವರ್ಣಿಸಲಳವಲ್ಲ ಸೂಕ್ಷ್ಮದಿ ನಿನ
ಗರುಹುವೆ ಕೇಳೆಲೆ ರಾಜ ೧೦

ಹರಿಯಂತೆ ವನಮಾಲಿಯಾಗಿ ಸ್ವರ್ಗದ ಹಾಗೆ
ನೆರೆ ಸುಮನಸಪಾಗಿ ಮಾಗಿ
ಸಿರುತವು ಶಿವಯುಕ್ತಮಾಗಿ ಕೈಲಾಸದಂ
ತಿರುತಿರ್ದುದದನಾನೇವೇಳ್ವೆ ೧೧

ಎಲ್ಲಿಯುಂ ಪರಿವ ಪೆರ್ದೊರೆ ಕೆರೆಯಿಂದಲ
ಲ್ಲಲ್ಲಿ ಪೊಳೆವ ಪೂದೋಟಗಳಿಂ
ಉಲ್ಲಸ ಕೋಕಿಲರವದ ವನಗಳಿಂದ
ಚೆಲ್ವಾಗಿ ಪೊಳೆದುದಾ ನಗರ ೧೨

ತರತರವಾಗಿ ಸಂಚರಿಪ ಹಂಸಗಳಿಂದ
ಮೊರೆವ ತುಂಬಿಯು ರವದಿಂದ
ಅರಳಿದ ಪಂಕಜಗಳ ಚೆಲ್ವಿಸಿಂದಲೊ
ಪ್ಪಿರುವ ಕೊಳಂಗಳ್ಪೊ[ಳ]ದವು ೧೩

ಸರಸಿಜ ಮೊದಲಾದ ಕುಸುಮಗಳೊಳಗಿರು
ತಿರುವ ಗಂಧವ ಕೊಂಡು ನಡೆವಾ
ಮರುತನು ಸೋಂಕಿ ಪೋಗಲು ಪಥಿ[ಕರು]ಶ್ರಮ
ದಿರವನಟ್ಟುತ ಸುಖಿಸುವರು ೧೪

ಅಲ್ಲಿಗಲ್ಲಿಗೆ ಪಥಿಕರು ಶ್ರಮದಿಂ ಬಂ[ದು]
ನಿಲ್ಲುವರೆಡೆಯಾಗಿ ಪೊಳೆವಾ
ಚೆಲ್ವಾದ ಅರವಟ್ಟಿಗೆಗಳು ಒಪ್ಪಿದವವ
ರುಲ್ಲಾಸವನು ನಾನೇವೇಳ್ವೆ ೧೫

ತೃಷೆಯಿಂದ ಜಲಕ್ಕೈದೆ ಕರವೆತ್ತಿಯೆರೆಯೆ ಕ
ಕ್ಕಸ ಕುಚಗಳನು ದಿಟ್ಟಿಸುತ
ಒಸರಲು ಕಡೆಗುದಕವು ಕಾಣದಲ್ಲಿಪ್ಪ
ಶಶಿಮುಖಿಯರ ನಗಿಸುವರು ೧೬

ನೀರಾನೀಯೆಂದೊರ್ವ ಪಥಿಕ ಕೇಳಿದಡಲ್ಲಿ
ನಾರಿ ನುಡಿದಳವನೊಡನೆ
ನೀರೆಯಾದೆನ್ನನು ನೀರಾನೀಯೆಂಬೆ ಕ
ಣ್ಣೀರೆಯೆ ನೋಡೆಂದಳವಳು ೧೭

ಚೆಲುವೆಯೋರ್ವಳು ಗಿಂಡಿಜೋಳಿಗೆ ಮುಚ್ಚಿಯಂ
ಗುಲವ ತೆಗೆದು ನೀರ ಬಿಡಲು
ಕಳಿತ ಮಾವಿನ ಪಣ್ಣ ಗಿಳಿ ಕುಕ್ಕಲಲ್ಲಿಂದ
ಲಿಳಿವ ಸಾರದವೋಲೊಪ್ಪಿದುದು ೧೮

ದಾರಿಯೊಳಿಂತೀವೈಭವಗಳ ನೋಡುತ
ಧೀರರೈತರುವ ಶಾಲಿಯೊಳು
ನಾರಿಯರ್ಗಿಳಿವಿಂಡ ಪಾಡಿಸುತಿರೆ ಕಂಡು
ಜಾರದೆ ನಿಲುವರೇನೆಂಬೆ ೧೯

ಕರಗಳ ನೆಗಪಿ ಪಕ್ಕಿಗಳ ಪಾರಿಸಲಾಗ
ಸರಸಿಜ ಮುಕುಳಮೆಂತೆಂದು
ತರುಣಿಯರ್ಕುಚಗಳಿಗೆರಗುತ ಭ್ರಮರ ಮ
ತ್ತನಿತು ಸಾಗುವವತಿ ಭರದಿ ೨೦

ಇಂತಪ್ಪ ದೇಶದೊಳಿರುಳು ಪಗಲು ಎಂಬು
ದಂ ತಿಳಿಯದೆ ಪಾಂಥಜನರು
ನಿಂತು ಸಾಗುವರತಿ ಬೆಳಕ ಬೀರುತ ದೇಶ
ಸಂತಸ ಭರಿತವಾಗಿತ್ತು ೨೧

ನಗರದ ದ್ವಾರವು ಹುಲಿಮುಖ ಪರರಾಯ
ರುಗಳೆಂಬ ಕರಿಪತಿಗಳಿಗೆ
ಮೃಗರಾಜನಾಸ್ಯವೆಂಬಂತಿತ್ತು ಸ್ವಾಶ್ರಿತ
ರ್ಗಗಣಿತ ಸುಖವೀವ [ತೆರದೆ] ೨೨

ಶೇಷನಂಬುಜಭವ ಲೋಕವ ನೋಳ್ಪೆನೆಂ
ಬಾಸೆಯಿಂ ಪಾತಾಳ[ದಿಂ]ದ
ತಾ ಸಾಗುವನೊ ಮೇಲಕೆಂಬಂತೆ ಕೋಟೆ ಸಂ
ಕಾಶಿಸುತಿತ್ತು ನೋಳ್ಪರಿಗೆ ೨೩

ಸರ್ವರು ಸಂತೋಷಸಾಗರರೆಯಲ್ಲಿ
ದೋರ್ವನಾದರು ಕಷ್ಟವೆಂದು
ಒರ್ವರುಸಿರಲಾವ ದೇಶವೊಡವೆಯೆಂಬ
ರಿರ್ವರಾ ನಗರೋತ್ತಮದಿ ೨೪

ಕೊಡೆಯೆಂಬರರಸಿಗೆ ಒಡಿವ ಛತ್ರವನೊಂದ
ಕೊಡೆಯೆಂಬರಿಲ್ಲ ಕೇಳ್ದಂದು
ಮಡಿಯೆಂಬರುದಕದೊಳ್ ರಕ್ಷಾಡಿಸಿದರುವೆಯು
ಮಡಿದುಹೋಗೆಂಬುಸುರಿಲ್ಲ ೨೫

ತಡೆಯೆಂಬರುರಗಮಂತ್ರವ ಬಾಗಿಲುಗಳೊಳು
ತಡೆಯೆಂಬ ವಾಕ್ಯಗಳಿಲ್ಲ
ಹೊಡೆಯೆಂಬರ್ಕೈ ತೃಣತೆನೆಗಳನಲ್ಲದೆ
ಹೊಡೆಬಡಿಯೆಂಬುಸುರಿಲ್ಲ ೨೬

ಕಂಟಕಿಯೆಂಬುದು ಫಲಿಸ ಫಲಿಕೆ ತಾ
ನಂಟು ನಾಮವು ದೇಶವಲ್ಲಿ
ಕಂಟಕಿಗಳುಯೆಂಬರಿಲ್ಲವರಸಿ ನೋಡೆ
ನಂಟರೆಯಲ್ಲದೆಲ್ಲರಿಗೆ ೨೭

ಭೋಗಿಗಳೆಲ್ಲರ್ ಪಾತಾಳವಾಸಿಗಳಲ್ಲಿ
ತ್ಯಾಗಿಗ[ಳ್ಯ]ತಿಗಳ್ ತಾವಲ್ಲ
ರಾಗಿಗಳೆಲ್ಲರು ನೋಡಲಾಶಾಬದ್ಧ
ರಾಗರಾ ನೃಪನ ರಾಷ್ಟ್ರದೊಳು ೨೮

ಇಂತಪ್ಪ ದೇವವ ಪಾಲಿಪ ರಾಯನು
ಸಂತತ ವಾಸುದೇವನನು
ಚಿಂತಿಸುತಲಿ ಹೃತ್ಕರ್ಣಿಕೆಯೊಳಗಿರುವಂಥ
ಸಂತಸವದನನೇವೇಳ್ವೆ ೨೯

ಉತ್ತಾನಪಾದರಾಯನೆಂಬ ಮಹಾತ್ಮಗೆ
ಪತ್ನಿಯರಿರ್ವರೊಪ್ಪಿಹರು
ಉತ್ತಮಗುಣದ ಸುನೀತಿ ಸುರುಚಿಯೆಂಬ
ರತ್ಯಂತ ಹರುಷ ಹೃದಯರು ೩೦

ರೂಪುಲಾವಣ್ಯ ಸುಂದರಕುಪಮಾನವ
ನೀಪ್ರೊಡವಿಯೊಳಗೆ ಬ್ರಹ್ಮ
ತಾಪಡೆ [ಯದೆ] ಯೋಚನಂಗೈಪನಿವರನು
ಚಾಪಕನಾರು ವರ್ಣಿಸಲು ೩೧

ವದನ ಚೆಲುವಿಗೆ ಸಮಸಾಗಲಿಲ್ಲ ತಾ
ನುದಿಸಿದಪೇನೆಂದು ಚ[ಂದ್ರ]
ಹೃದಯದೊಳಾಳೋಚಿಸಿ ಪಕ್ಷಪಕ್ಷಕೆ
ಮುದದಾಳ್ದು ಕುಂದು[ತ]ಲಿಹನು ೩೨

ವನಿತೆಯರಕ್ಷಿಯುಗಳಕೆಣೆಯಾಗಲಿ
ಲ್ಲೆನುತಲಂಬುಜಗಳು ತಾವು
ಪುನಹ ಪುನಹಯೆಲೆವಿಡುತಲೊಪ್ಪದೆ ಪೋಗ
ಲನಿತರೊಳುದುರಿಸುತಿಹವು ೩೩

ನಾಸಿಕಕೆಣೆ ನಾನಾಗುವೆನೆಂಬ ಗರ್ವದ
ಲಾಸಂಪಿಗೆಯು ಪರಿಮಳವ
ಸೂಸುತಲರಳಿ ಸಮಕೆ ಬಾರದಿರೆ ಕಾಂತಿ
ಘಾಸಿ ನಾಚಿಯೆ ಕೊರಗುವವು ೩೪

ಕುಂದದ ಮೊಗ್ಗು ತಾನಿವಳ ದಂತಕೆ ಸಮ
ಬಂದಪೆನೆಂದು ಗರ್ವದಲಿ
ನಿಂದು ಪಾಸಟಿಯಾಗದಿರಲು ಚಿಂತಿಸಿ ಬಹು
ಕಂದಿ ಮುಗ್ಗುಲನಿಕ್ಕುತಿಹವು ೩೫

ತರಳೆಯರಿವರ ಗಮನವನು ಕಂಡಾಗ
ಕರಿಗಳು ಮಂದಗಳಾಗಿ
ನಿರುತ ಯೋಚಿಪವೆಂಬ ತೆರದಲಿದ್ದವು ಸಮ
ಬರುವೆವು ತಾವೆಂತೆಂದೆನುತ ೩೬

ಕುಂಭಕುಚೆಯರ್ಕುವಲಯದಳ ನೇತ್ರೆಯ
ರಂಬುಜಮುಖಿಯರು ನಿತ್ಯ
ಬೆಂಬಿಡದುತ್ತಾನಪದರಾಯನೊಡನಿಪ್ಪ
ಸಂಭ್ರಮವದನಾನೇಪೇಳ್ವೆ ೩೭

ತರುಣಿಯರಾ ಕುಂಭಕುಚಗಳ ಭಾರವ
ಹೊರುತಲಾ ಬಡನಡು ತಾನು
ಇರುವುದೆಂತಕಟ ಸಿಂಹಗಳ್ನೋಡಿ ಸಮಭಾರ
[ವಿ]ರಲ್ನುಚಿಗಡವಿಗೈದಿದುವು ೩೮

ನಿರುತವು ವರನಾರಿಯರು ಸಹಿತಾ ರಾಯ
ನಿರುವ ಮಾಹಿಷ್ಮತಿ ಪುರವು
ಧರಣೀದೇವಿಯ ಶಿಖಾಮಣಿಯೆಂಬ ತೆರದಿಯೊ
ಪ್ಪಿರುತಿರ್ದುದದನಾನೇವೇಳ್ವೆ ೩೯

ಉತ್ತಾನಪದರಾಯನರಸಿ ಸುನೀತಿಯು
ಪೆತ್ತಳು ಶ್ರೀಹರಿಪದದಿ
ಭಕ್ತಿಸಾಗರನೆಂಬ ಕುವರನ ರಾಯನ
ಚಿತ್ತಕಮಲಕೆ ಭಾಸ್ಕರನ ೪೦

ಕರಸಿ ಜೋಯಿಸರನು ತರುಣನ ಜನನದ
ಪರಿಯನೆಲ್ಲವನವರರುಹೆ
ಹರುಷಸಾರವ ತಾ .. ಳದವನಾಗಿ ಭೂಮಿಯ
ಸುರರ ದಣಿಸಿದ ದಾನದಲಿ ೪೧

ಗಜಹ[ಯ] ಗೋಭೂಧಾನ್ಯದ ದಾನದಿಂ
ದ್ವಿಜರ ತೋಷಿಸಿದ ಸಂಭ್ರಮವ
ಭುಜಗನಾಥನಿಗಳವಡದು ನಂತಿಸಲಿದ
ಋಜುವಾಗಿ ಕೊನೆಗಾ[ಂ]ಬರಾರು ೪೨

ಬಾಲನ ಮುಖಪದ್ಮ ದರುಶನದಿಂದಲಾ
ಬಾಲೆ ಸುನೀತಿ ಸಂತಸವ
ತಾಳುತ ಮರೆವಳಂಗವ ವಾಸುದೇವನ
ಶೀಲದಿ ಗುಣವ ಪಾಡುತ್ತ ೪೩

ಧ್ರುವನೆಂಬ ನಾಮದಿಂದತಿಮುದ ಬೀರುತ
ಲವನಿಯೊಳಾಡುವ ಮಗುವ
ಕುವಲಯನಾಥನುತ್ತಾನಪದರಾಯ ತಾ
ನವಲೋಕಿಸುತ ತಾಳ್ವಮುದವ ೪೪

ವೀರ್ಯದಿಂ ಶೌರ್ಯದಿಂ ನೋಡೆ ಗಾಂಭೀರ್ಯ ಮಾ
ಧುರ್ಯದಿಂದೌದಾರ್ಯದಿಂದ
ಸ್ಥೈರ್ಯದಿಂ ಧೈರ್ಯದಿಂ ಪರಮಸುಖ[ಕ]ರ ದೈ
ಶ್ವರ್ಯದಿಂ ಕುಂದಿಲ್ಲದಿಹನು ೪೫

ಅಕಟ ಪುಣ್ಯವೆ ಭಾಪೆಂದೆನುತ ಸಂತೋಷದಿಂ
ಸಕಳತ್ರನಾಪುರದಲ್ಲಿ
ಸಕಲಭಾಗ್ಯದೊಳೆನಗೆಣೆಯಾರೆನ್ನುತಲಿ ಪು
ತ್ರಕನ ಪೋಷಿಸುತಲಿಂತಿರ್ದ ೪೬

ಆಸಿತರೊಳ್ಕಿರಿಯು ಹೆಂಡತಿ ಸುರುಚಿಯುಂ ಗರ್ಭ
ವನು ತಾಳಿ ಉತ್ತಮನೆಂಬ
ಘನನಾಮವುಳ್ಳ ತನಯನ ಪಡೆದು ಮುದ
ವನಧಿ ತಾನಾಗಿರ್ದಳಿಂತು ೪೭

ಹಿರಿಯ ರಮಣಿ ಸುನೀತಿಯ ಗರ್ಭದಿಂ ಬಂದ
ತರುಣಧ್ರುವನು ಸಹ ಕೂಡಿ
ಎರಡನೆಯರಸಿ ಸುರುಚಿಯ ಕುವರನಾಡು
ತಿರಲೀಕ್ಷಿಸುತರಾಯನಿರ್ದ ೪೮

ಚಂದ್ರನ ಮುಖವ ತಾ ಕಂಡತಿ ಹೆಚ್ಚುವ
ಸಿಂಧುವಿನಂಥ ಕುವರನ
ಇಂದುವಿನಂತೆಸೆವಾಸ್ಯದ ದರುಶನ
ದಿಂದುಬ್ಬುತಿರ್ದನಾ ರಾಯ ೪೯

ಅಂಬೆಗಾಲಿಟ್ಟವನಿಯೊಳು ಸಾಗುತ ಮತ್ತೆ
ಹಿಂಭಾಗದೊಳು ಬರುತಿಹರ
ಮುಂಬರಿಯದೆ ತಿರುಗೀಕ್ಷಿಪ ಸಿರಿಯ ನೋ
ಳ್ಪಂಬಕ ಭಾಗ್ಯವಿನ್ನೆಂತೋ ೫೦

ಪಣೆಯೊಳಲುಗುವ ಅರಳೆಲೆ ಮಾಗಾಯಿಗಳಿಂದ
ವನಜದಳಾಂಬಕದಿಂದ
ಮನುಮಥ ಚಾಪದೊಲ್ ಪೊಳೆವ ಪುರ್ಬಿಂದಲಾ
ಮನಃಮಥಯುಗರಂತೊಪ್ಪಿದರು ೫೧

ಕನ್ನಡಿಯೊಲು ಧಳಧಳಿಪ ಕದಪುಗಳ
ನುನ್ನತ ನಾಸಿಕದಿರವ
ಎನ್ನ ಭಾಗ್ಯವೆ ಬಾಯೆಂದಪ್ಪಿ ಚುಂಬಿಪ ರಾಯಂ
ನುನ್ನತಕಿನ್ನೆಣೆಯುಂಟೆ ? ೫೨

ಜನಕ ಜನನಿಯರ ಚಿತ್ತಪಂಕಜಗಳಿ
ಗಿನಯುಗ ಉದಿಸಿತೆಂಬಂತೆ
ಘನಬಾಲಲೀಲೆಯಿಂದಾಡಿ ತೋರಿಸುತಿರ್ಪ
ರನು ನೋಳ್ಪರುನ್ನತವೆಂತೊ ೫೩

ಚರಣಗಳವನಿಯೊಳಿಡುತ ಸಾಗುತ ಮತ್ತೆ
ಕರಗಳ ಧರಣಿಗೂರುತಲಿ
ಮರಳಿ ನಿಲ್ಲುತ ಧ್ವನಿಗೈಯುತ ಬರುವರ
ನೆರೆ ನೋಳ್ಪರುನ್ನತವೆಂತೊ ೫೪

ತರುಣರನೀಕ್ಷಿಸಿ ಮೋಹಪಡುವುದನ್ನು
ಪರಿಪರಿಯಿಂದಲುಚ್ಚರಿಸಿ
ಎರಡು ಸಾಸಿರ ಜಿಹ್ವೆಯಿರುವನಿಗರಿದಿದ
ನೊರೆವಂಥ ಕವಿಯಾರು ಜಗದಿ ೫೫

ಇಂತಪ್ಪ ಸುತರ ಸಹಿತಲಾ ರಾಯನು ಬಹು
ಸಂತಸದಿಂದಲಾ ಪುರದಿ
ಕಂತುಪಿತನ ದಿವ್ಯ ಚರಣ ಪಂಕರುಹಗ
ಳಂ ತಾಳುತಿರ್ದನು ಮುದದಿ ೫೬

ನಿರುತವೀ ಧ್ರುವನ ಚರಿತೆಯನು ಭಕ್ತಿಯಿಂ
ಬರೆದೋದಿ ಕೇಳಿದ ಜನರ
ವರಚಿಕ್ಕನಾಗಪುರದ ವೆಂಕಟೇಶನು
ಪೊರೆವನು ಸುಖವಿತ್ತು ದಯದಿ ೫೭

[ಸುರುಚಿ ಧ್ರುವನನ್ನು ನಿಂದಿಸಿದುದು]

ಕೇಳಲೆ ರಾಜ ಸುನೀತಿಯಣುಗ ಧ್ರುವ
ಲೀಲೆಯಿಂದಾಡುತಲಿರಲು
ಬಾಲೆ ಸುರುಚಿಯು ಸುತನ ಪ್ರಿಯದುಕ್ತಿಯ
ನಾಲಿಸುತಿರ್ದನಾ ರಾಯ ೧

ತೊಡೆಯ ಮೇಲೆತ್ತಿ ಕುಳ್ಳಿರಿಸಿಕೊಂಡತಿ ಮುಂದ
ವಡುತಲುತ್ತಮನೆಂಬ ಸುತನ
ನುಡಿಸುತ ಸುರುಚಿಯಂತೆನ್ನುವಯೆರಡನೆ
ಮಡದಿ ಸಂಮೋಳದಲಿರ್ದ ೨

ಒಬ್ಬರೊಬ್ಬರು ತನಯನ ಕರೆದಪ್ಪುತ
ಲುಬ್ಬುವ [ಹ]ರುಷದಿ ಸುತನು
ತಬ್ಬಿಬ್ಬಿನುಕ್ತಿಯಾಡುವುದನಾಲಿಸುತಲಿ
ದಬ್ಬುವರಖಿಳ ಶ್ರಮಗಳ ೩

ಒಂದು ದಿವಸ ಸುರುಚಿಯು ಸಹಿತಾ ರಾಯ
ಕಂದನನಾಡಿಸುತಿರಲು
ಬಂದು ಧ್ರುವನು ಸಿಂಹಾಸನದೊಳು ಕುಳಿ
ತೆಂದನು ತಂದೆಯ ಕೂಡೆ ೪

ಉತ್ತಮನನ್ನೆಯಾಡಿಸುತಿಹೆ ಎನ್ನನೂ
ಎತ್ತಿಕುಳ್ಳಿರಿಸಿಕೊ ನಿನ್ನ
ಉತ್ತಮಾಂಕದೊಳೊಮ್ಮೆಯಾದರು ಎನುತ ಮು
ತ್ತತ್ತು ಕಾಡುತಲಿ ಬೇಡಿದನು ೫

ಇಳಿಸು ಚಿಕ್ಕಮ್ಮನಣುಗನನ್ನು ಕ್ಷಣ ಮಾತ್ರ
ನಿಲಿಸಿಕೊ ತೊಡೆಯ ಮೇಲ್ನಿನ್ನ
ಒಲಿದೆನ್ನನಪ್ಪಿ ಮಾತಾಡದಿರುವೆ ಏತ
ಕುಲುಹು ಎನ್ನೊಡನತಿ ಪ್ರಿಯದಿ ೬

ಮಾತಾಡದಿರುವೆಯೇತಕೆ ಎನ್ನೊಳಿಲೆಯೆನ್ನ
ತಾತ ಕೋಪವ ತಳೆದಿಹೆಯೊ
ಪ್ರೀತಿ ಚಿಕ್ಕಮ್ಮನಣುಗನೊಳೆ ನರಿಯೆ ವೇಳ್
ನೀ ತಾರದಿಹೆ ದಯವನ್ನು ೭

ಎನ್ನೊಡನೇತಕಿನಿತು ಮುನಿಸೆಲೆ ತಂದೆ
ನಿನ್ನಾತ್ಮಭವನಲ್ಲವೇನೈ
ಮನ್ನಿಸುತಿರುವೆ ಚಿಕ್ಕಮ್ಮನಣುಗನ ಮಾ
ತನ್ನು ಲಾಲಿಸುತ ಪ್ರೀತಿಯಲಿ ೮

ಇತ್ತ ನೋಡೆನ್ನ ನುಡಿಸು ನುಡಿ ವಾಕ್ಯವ
ನುತ್ತಮನನು ತೊಡೆಯಿಂದ
ಪ್ರತ್ಯೇಕ ಪೀಠದೊಳಿರಿಸಿ ಕ್ಷಣವು ಎನ್ನ
ನೆತ್ತಿಕೊಂಡಾಡಿಸು ಪಿತನೆ ೯

ಅದು ಪೋಗಲವನಿಳಿಯದೆ ಇರಲೆನ್ನಯ
ವದನವ ನೋಡಿ ಮಾತನ್ನು
ಮುದದಿಂದ ನುಡಿಸದಿರುವೆ ಕೋಪವೇನು ನಿ
ನ್ನುದರಸಂಭವನಲ್ಲವೇನೈ ೧೦

ಕಾಡುತಲಿಂತು ಎತ್ತಿಕೊಯೆನ್ನನೆನ್ನುತ
ಬೇಡುವ ಧ್ರುವನ ಮನ್ನಿಸಲು
ನೋಡುವ ಸುರುಚಿಯು ಮೊಗವ ರಾಯನು ಮನ
ಬಾಡುವಳಿವಳೆಂಬ ದಯದಿ ೧೧

ಎತ್ತಿಕೊಂಡರೆ ಮುನಿದಪಳೊ ಸಂತಸವನ್ನು
ಚಿತ್ತಕೆ ತರುವಳೊ ಎಂಬ
ಇತ್ತೆರನಾದ ಯೋಚನೆಯಿಂದ ಸುತನ ತಾ
ನೆತ್ತಿಕೊಳ್ಳದೆ ಸುಮ್ಮನಿರ್ದ ೧೨

ನೋಡುತಲಿಹನು ತನಯು ತನ್ನನೆತ್ತಿ ಮು
ದ್ದಾಡಿಯಾಡಿಸುಯೆಂದು ಬಿಡದೆ
ಬಾಡುವಳೊ ಮುದದಾಳ್ವಳೊಯಿವಳೇನ
ಮಾಡಲೆನುತ ಸುಮ್ಮನಿರ್ದ ೧೩

ಮೋಹ[ವು] ಸುತನ ಮೇಲತಿ ಪೂರ್ಣವಾಗಿರ
ಲಾ ಹೆಂಡತಿಯ ಮುಖ ನೋಡಿ
ಬಾಹುಗಳಿಂ ಬಿಗಿಯಪ್ಪದೆ ಮಗನನ್ನು
ತಾ ಹತ್ತುತಿಹ ಚಿಂತಾಗಿರಿಯ ೧೪

ರಾಯನು ಸುತನ ಮಾತಾಡಿಸದಿರಂಬಭಿ
ಪ್ರಾಯವ ಕಂಡು ಸುರುಚಿಯು
ಪ್ರೀಯುವೆನ್ನೊಳಗರಸಗೆ ಪೂರ್ಣವೆನ್ನುತ
ಲಾಯತ ಮುದವ ತಾಳಿದಳು ೧೫

ಎನ್ನಯ ವಶವಾದನರಸ ಸುನೀತಿಯೊ
ಳುನ್ನತ ಪ್ರಿಯಂವಿಲ್ಲವೆಂದು
ತನ್ನ ಮನದೊಳಾಳೋಚಿಸುತ ರಾಯನ ಮುಖ
ವನ್ನು ನೋಡುವಳತಿ ಮುದದಿ ೧೬

ಆವ ಪರಿಯೊಳಣುಗನು ಎತ್ತಿಕೊಳ್ಳೆಂದ
ಡಾ ವಸುಧಿಪ ಸುಮ್ಮನಿರಲು
ಭಾವೆ ಸುರುಚಿ ತನಗಾಯ್ತು ಸಲುಗೆಯೆಂದು
ಬೈವರೆ ಬ[ಗ]ದಳು ಸುತನ ೧೭

ಏತಕೆ ಕರುಣದೋರುವೆಯೆಲೆ ಸುತನೆ ನೀ
ನೇತಕೆ ಬಯಸುವೆ ಸುಖವ
ಪ್ರೀತಿ ನಿನ್ನೊಳಗಾರಿಗುಂಟು ಸಾರೈ ನಿನ್ನ
ಮಾತೆ ಸುನೀತಿಯ ಬಳಿಗೆ ೧೮

ಒರಿದೆ ಯೋಚಿಸಿಯಾನೆಬಡಲು ಬಪ್ಪುದೆ ಸುಖ
ಪರರಿಗೆ ಪೂರ್ವಜ[ನ್ಮ]ದೊಳು
ತರುಣ ಕೇಳಣುವನಾದರು ದಾನಗೈಯದೆ
ಒರಲುವೆ ಏತಕೆ ನೀನು ೧೯

ಸರ್ಬಲೋಕೇಶನ ಸುಖವ ನೀ ಬಯುಸುವೆ
ನಿರ್ಭಾಗ್ಯ ಬರಿದೆ ಮೋಹದೊಳು
ದುರ್ಭಗೆಯಾದಂಥ ವನಿತೆ ಸುನೀತಿಯು
ಗರ್ಭದಿಂ ಬಂದಂಥ ಮರುಳೆ ೨೦

ಎನ್ನ ಸುತನ ಮೇಲೆ ರಾಯ ಪ್ರೀತಿಯ ಮಾಳ್ಪ
ನೆನ್ನುತಲಾನೆ ಬಟ್ಟೀಗ
ಮನ್ನಿಸಿ ಬೇಡಿಕೊಳ್ಳುವೆ ನಿನ್ನನು ಲಾಲಿ
ಪಂ ನಾಡೊಳೊರ್ವನು ಇಲ್ಲ ೨೧

ಸಾರುಸಾರುತ್ತ ಬರಿದೆ ಹಂಬಲಿಸಬೇಡ
ದೂರ ಕೇಳುವರಾರು ನಿನ್ನ
ನಾರಿ ಸುನೀತಿಯ [ಬಳಿ]ಪೋಗು ಬೇಗೆಂದಂ
ಚೀರಿದಳ್ ಸುರುಚಿ ಕೋಪದಲಿ ೨೨

ಕಿರಿಯರಸಿಯು ತಂದಮೇಲೆ ಮೊದಲ ನಾರಿ
ಇರುವಳೆಂತಣುಗ ಸಂತಸದಿ
ನಿರುತವೆನ್ನನು ರಾಯ ಮನ್ನಿಪ ಪ್ರೀತಿಯ
ತೊರೆದ ನಿನ್ನವ್ವೆಯೊಳ್ಕೇಳು ೨೩

ಪಟ್ಟದ ಗದ್ದುಗೆಯೊಳು ಮಂಡಿಸುವರೆ ನೀ
ಕಷ್ಟದಿಂ ತಪಗೈದು ವನದಿ
ಸೃಷ್ಟಿಕರ್ತನ ಜನಕನ ಮೆಚ್ಚಿಸಿಯೆ ಬೇಗ
ಹುಟ್ಟೆನ್ನ ಗರ್ಭದಿ ಮರುಳೆ ೨೪

ಹೋಗು ಬರಿದೆ ಕೇಳಬೇಡ ರಾಯನು ನಿನ್ನ
ರಾಗದಿಂ ಮನ್ನಿಪುದಿಲ್ಲ
ಬೇಗೆಬಡದೆ ಎನಗಿಲ್ಲವೆಂಬಾಸೆಯು
ನೀಗುತ ಸ್ವಸ್ಥದಿ ಸಾರು ೨೫

ಇನ್ನೂ ಬಹಳವಾಗಿ ದೈನ್ಯಬಟ್ಟರು ಕಾಣೆ
ನಿನ್ನನು ಕಡುಮೋಹದಿಂದ
ಮನ್ನಿಸುವವರನಳಲದೆ ಸುಮ್ಮನೆ ಸಾರು
ನಿನ್ನವ್ವೆಗುಸುರಳಲುಗಳ ೨೬

ದುಃಖಪಡುವೆ ನೀನುತ್ತಮನೆಂಬೆನ್ನಣುಗನ
ಸತ್ಕಾರದಿಂ ರಾಯ ತಾನು
ಚಿಕ್ಕವ ಬಾಯೆಂದಪ್ಪುವನೆನ್ನನುಡಿನನೆಂ
ದುಕ್ಕುವದ್ವೇಷದಿ ಮರುಳೆ ೨೭

ಬಿಡುಬಿಡು ಕ್ಲೇಶವನಾಸೆಯಿಲ್ಲವು ನಿನ
ಗಡವಿಯೊಳಗೆ ತವಗೈದು
ಪಡೆ ವಾಸುದೇವನ ಕೃಪೆಯಿಂದ ವರಗಳ
ಹುಡುಗ ನೀ ಕೇಳೆನ್ನ ನುಡಿಯ ೨೮

ನಿನ್ನ ಮಾತೆಯು ಕಂಡು ರಾಯ ತಾ ಪ್ರೀತಿಯಂ
ನಿನ್ನು ಮಾಡುವುದ ನಾ ಕಾಣೆ
ಇನ್ನಾನೆಯೇನು ಸಾರತ್ತ ಜನನಿಯೊಡ
ನೆನ್ನು ನಾನೆಂದ ಮಾತುಗಳ ೨೯

ಕಡುಮೋಹದಿಂದ ಚಿಕ್ಕಮ್ಮನ ಸುತನನ್ನು
ನುಡಿಸುವ ಪ್ರಿಯದೊಳಾಡಿಸುವ
ಪೊಡವೀಶನೆಂದು ದ್ವೇಷವ ತಾಳಿದರೆ ನಿನ್ನ
ಗೊಡವೆಯೊಬ್ಬರಿಗಿಲ್ಲ ಮರುಳೆ ೩೦

ಒಬ್ಬರ ಸುಖವ ಕಂಡೆನಗಿಲ್ಲವೆಂದು ಮು
ತ್ತೊಬ್ಬನು ತಾನಾಸೆಗೈಯೆ
ಒಬ್ಬರಿಗೀಯದೆ ಪೂರ್ವದಿ ತನ್ನ ನಿ
ನ್ನೊಬ್ಬ ಮನ್ನಿಪನುಂಟೆ ಮರುಳೆ ೩೧

ಈಗಿನ ಭವದಲಾದರು ಮನುಜರು ತಾವು
ರಾಗದಿಂ ನುಡಿಸದಿ[ರ್ದಡೆ]ಯು
ಆಗರು ವೇಳೆಗೀ ಪರಿಯು ನಂಮವ ತಾನು
ಹೋಗೆ ಬಪ್ಪುದು ಕೇಳು ಮರುಳೆ ೩೨

ಹೆಳವನೊಬ್ಬನು ದಾರಿಯೊಳಗೈದುತಲಿ ಮತ್ತೆ
ಬಲವುಯಿಲ್ಲದೆ ತನಗೊಬ್ಬ
ಎಳನೀರೊಳಾನೆಯಿದ್ದಡೆ ಬಪ್ಪುದೆಂತು ನೀ
ನಳುವೆ ಏತಕೆ ಮುಂಕುಮರುಳೆ ೩೩

ತನಗೆ ದೈವವು ಕೊಡದಿರ್ದಡೆ ಪರರು ತಾ
ವನುದಿನ ಸುಖಬಡುತಿರಲು
ಮನದಿ ದ್ವೇಷಿಸಲು ಬಪ್ಪುದೆ ಜನ್ಮಜನ್ಮಕು
ಘನದುಃಖವಲ್ಲದೆ ಮರುಳೆ ೩೪

ಬಿತ್ತದೆ ಬೀಜವ ನೆಲದೊಳು ಫಲ ಕೈಯ
ಹತ್ತುಪವೆಂತು ಮತ್ತೊರ್ವ
ನಿತ್ಯ ಸಂಪದಬಡುತಿರಲದ ಕಂಡು ತಾ
ನತ್ತಡೆ ಬಪ್ಪುದೆ ಮರುಳೆ ೩೫

ರಂಗನರ್ಚನೆಗೈದು ತತ್ಕೃಪೆಯಿಂದ ವ
ರಂಗಳ ಪಡೆಯದೆ ಸುಖವು
ಮಂಗನಂದದಲಿ ಮರಳಿ ನೆಗೆಯುತ ಮತ್ತೆ
ಲಂಘಿಸಿದಡೆಯು ತಾ ಬ[ಹುದೆ] ೩೬

ಕೋಗಿಲೆ ವನದಿ ಸ್ವರಂಗೈಯಲದ ಕಂಡು
ಕೂಗುವೆನದರೊಲೆಂದೆನುತಾ
ಕಾಗೆ ತನ್ನುರುಶಕ್ತಿಯಿಂ ಮೊರೆಯಲು ಸಮ
ನಾಗಬಲ್ಲುದೆ ಕೇಳು ಮರುಳೆ ೩೭

ಗರುಡನಾಗಸವನಳುಕದೈದುತಿಹನೆಂದು
ಮೊರೆಯುತಲವನ ಸರಿಸಕೆ
ಬರುವೆ ತಾನೆಂದು ಮರ್ಕಟ ನೆಗೆದರೆ ಬಾಳ್ಪು
ದರಿದೊ ಮತ್ತೇನು ಕೇಳ್ಮರುಳೆ ೩೮

ಸಟೆಯಿಲ್ಲವೆನ್ನ ಮಾತುಗಳು ನಿನ್ನನು ರಾಯ
ದಿಟ ಪರಾಕ್ರಮಿಯೆ ಬಾಯೆಂದು
ಕುಟಿಲಕುಂತಳದ ಮುಖವ ಚುಂಬಿಸುವದು ದು
ರ್ಘಟವು ನೀ ಸಾರತ್ತ ಮರುಳೆ ೩೯

ಹನ್ನೆರಡಬುದ ತನಕ ದೈನ್ಯದಿ ನೀನು
ಮನ್ನಿಸೆಂದೆನುತ ರಾಯನನು
ಉನ್ನತದಾಸೆಯಿಂ ಕೇಳ್ದರು ನುಡಿಸುವ
ರನ್ನು ನಾ ಕಾಣೆ ಕೇಳ್ಮರುಳೆ ೪೦

ಭುವನವಲ್ಲಭನೆನ್ನ ಕ್ಷಣಮಾತ್ರ[ವಗಲಿ ತಾ]
ನವನಿಯೊಳಿರಲು ಯೋಚಿಸನು
ಸವತಿಯೆನಗೆ ನಿನ್ನ ಜನನಿ [ಬಾಳುವು]ದೆಂ
ತವಿವೇಕದಣುಗ ನೀ ಸಾರೋ ೪೧

ಮೋಗಡವಿಗೆ ತವಗೈ[ದು] ಮೆಚ್ಚಿಸು ದಯಾ
ಸಾಗರ ವಾಸುದೇವನನು
ಆಗಲಾ ದೇವನಿಂ [ವರ]ವನು ಪಡೆದು ನೀ
ನಾಗು ಸಿಂಹಾಸನಪತಿಯು ೪೨

ಇಂತೆಂದು ಕೋಪದಿಂ ಸುರುಚಿ ಘರ್ಜಿಸಲಾಗ
ಚಿಂತಾಸಾಗರವನು ಸೇರಿ
ಅಂತವಿಲ್ಲದೆ ಬಿಕ್ಕುತಳುತ ತನ್ನಯ ಮಾತೆ
ಯಂತೀ [ ..] ಕಣುಗನ್ನೈದಿದನು ೪೩

ನಿರುತವೀ ಧ್ರುವನ ಚರಿತೆಯನು ಭಕ್ತಿಯಿಂ
ಬರೆದೋದಿ ಕೇಳಿದ ಜನರ
ವರಚಿಕ್ಕನಾಗಪುರದ ವೆಂಕಟೇಶನು
ಪೊರೆವನು ಸುಖವಿತ್ತು ದಯದಿ ೪೪

## ಸುನೀತಿ ಪ್ರಳಾಪಿಸಿದಳು

ಕೇಳಿಲೆ ರಾಜ ಸುರುಚಿಯು ಧಿಕ್ಕರಿಸಲು
ಬಾಲಕ ಧ್ರುವನು ಶೋಕವನು
ತಾಳುತ ಮನದಿ ತನ್ನಯ ಮಾತೆಯಿರುತಲಿ
ಪ್ಪಾಲಯದೆಡೆಗೆ ಸಾರಿದನು ೧

ಕಣ್ಣನುಜ್ಜುತ ಕರದಿಂದಲಾ ವದನದ
ಬಣ್ಣಗುಂದಿಯೆ ಕಂಠದಲ್ಲಿ
ಎನ್ನುವ ಉಕ್ತಿ ಬಾರದೆ ಬಿಕ್ಕುತತಿ ಖೇದ
ದಿಂ ನಡೆತಂದನಾ ಸುತನು ೨

ಮಾತನಾಡದೆ ಸುಮ್ಮನಿರುವ ರಾಯನ ಮತ್ತೆ
ತಾ ತಿರುಗೀಕ್ಷಿಸುತಾಗ
ಏತಕಳುಪೆಯಪ್ಪಯೆಂದು ಮನ್ನಿಸನೆ ಎಂ
ದಾ ತರುಣನು ಸಾಗುತಿರ್ದ ೩

ಜನಕ ತಾನೆನ್ನ ಮನ್ನಿಸುವನೆಂಬಾಸೆಯು
ಮನಕೆ ತಾರದೆ ಶೋಕದಿಂದ
ಜನನಿಯಿಪ್ಪೆಡೆಗೆ ಸಾಗಿದನು ಕಂಗಳ ಜಲ
ತನುವಿನ ಮೇಲೆ ಭೋರಿಡುತ ೪

ತುಟಿಗಳು ನಡುಗುತ ಬಿಕ್ಕುತ ಮನದೊಳು
ಕಟುಕಿ ಸುರುಚಿಯು ಬೈದುದಕೆ
ಪಟುಪರಾಕ್ರಮಿ ಬಾಲನಳುತ ಬ[ರ್ಪ]ದ
ಕುಟಿಲ ಕುಂತಳೆಯಿಕ್ಷಿಸಿದಳು ೫

ಶೋಕದಿಂ ಕುದಿದುಃ ರೋ[ದಿಸು]ತ ಮಾತಾಡಲು
ವಾಕುಬಾರದೆ ಜಿಪ್ವೆಕೊನೆಗೆ
ಈ ಕಷ್ಟಕೊಳಗಾದೆ[ನೆಂ]ದು ಯೋಚಿಸುತ ಬ
ರ್ಪಾ ಕುವರನ ನೋಡ್ದಳಬಲೆ ೬

ನಿಡಿದೋಳ್ಗಳಿಂ ಬಿಗಿದಪ್ಪಿ ಮೋಹದಿ ತನ್ನ
ತೊಡೆಯ ಮೇಲರ್ಭಕನನ್ನು
ಮಡದಿ ಕುಳ್ಳಿರಿಸಿಕೊಂಡಕ್ಷಿಯ ಜಲವನ್ನು
ತೊಡೆದಳಂಬರ ಕೊನಯಿಂದ ೭

ಆರೇನ ನುಡಿದರು ನಿನ್ನನು ಕಠಿಣದಿಂ
ಭೂರಿಶೋಕವಿದೇನು ಪೇಳು
ಹೋರಿಯಾಡಿದೆಯೊ ಬಾಲಕರೊಡನೆಲೆ ಕಂದ
ತೂರಿ ಶೋಕವ ಮಾತನಾಡೈ ೮

ಎನ್ನೆದೆದಾವರೆಗಿನನೆ ನೀನಳುವಂತೆ
ನಿನ್ನನದಾರು ಬೈದಪರು
ಇನ್ನುಳಿ ಕ್ಲೇಶವ ನುಡಿ ಮಧುರೋಕ್ತಿಯ
ನೆನ್ನೊಡನೆಲೆ ಬಾಲಮಣಿಯೆ ೯

ಮಾತನಾಡದೆ ಸುಮ್ಮನಳುತಲಿರುತಿಪೆ
ಏತಕೆ ಜಡಿದು ನಿನ್ನುವನು
ಮಾತನಾಡಿಸಿದರಾರಕಟ ಶೋಕವ ಬಿಡು
ತಾತ ಪೇಳೊಡೆದು ಕಾರಣವ ೧೦

ಆನೆಯನೇರಿಸಿ ಆಳುಕುದುರೆ ಸಹಿತ
ಲಾನಂದದಿ ನಿನ್ನುವನು
ಯೀನಗರದೊಳುತ್ಸವವ ಮಾಳ್ಪೆ ನಿನ್ನ ಬೈ
ದಾದರನೆಲ್ಲ ತಾ ಬಂತೆ (?) ೧೧

ಕೇಳು ನಿನಗೆ ಮನಕಾಪದರೊಳಗಾಸೆ
ನೀಳವಾಗಿಪ್ಪುದದನ್ನು
ಬಾಲಕ ಮೌಳಿರತ್ನವೆ ನಿನಗೀವೆನು
ಪೇಳಯ್ಯ ದುಃಖಕಾರಣವ ೧೨

ಒಡವಳೆ ಭಾಗ್ಯದಿ ನಾನು ನೀ ಬೇಡಿದ
ಒಡವೆಯನೆಲ್ಲಿಪನೀವೆ
ಹುಡುಗನೆಂದರೊ ನಿನ್ನನೆಡಹಿ ಬಿದ್ದೆಯೊ ನೀನೆ
ನುಡಿಯಯ್ಯ ದುಃಖಕಾರಣವ ೧೩

ಮಕುಟಕುಂಡಲಬಾಹುಪುರಿ ಕಂಕಣವು ಮತ್ತೆ
ಸಕಲರತ್ನಗಳಿಂ ತೆತ್ತಿಸಿದ
ಅಖಿಳಭೂಷಣಗಳ ನೂತನವೀವೆನು
ಪ್ರಕಟಿಸಿ ನುಡಿಯೈ ಕಾರಣವ ೧೪

ಕಂಠಕ್ಕೆ ತಕ್ಕ ಮುಕ್ತಾಮಣಿಮಾಲೆ ವೈ
ಕುಂಠವಲ್ಲಭನ ಮೂರುತಿಯು
ಉಂಟಾದ ಪದಕಸಹಿತವೀವೆ ಬಾಧಿಪ್ಪು
ದೇಟಿವ ಬಗೆಯು ಪೇಳಯ್ಯ ೧೫

ನಾನು ಸುಮ್ಮನೆಯಿರ್ದಡೆಯು ನುಡಿಸುತಲಿನ್ನ
ನೀನೆಯೆಯ್ದುವೆ ಎಲ್ಲಡೆಯು
ನಾನಾಪರಿಯಲಿ ಪೇಳೆಂದರುಸುರದಿಹೆ
ಏನು ಕಾರಣ ಬಾಲಮಣಿಯೆ ೧೬

ಸುಮ್ಮನೆ ಅಳಲಲೆನ್ನೊಡನೆ ಕಾಣುವೆನೆಂತು
ಖುಮ್ಮನೆ ಭಕ್ಷ್ಯಗಳನ್ನು
ಉಮ್ಮಳಿಸಿಯೆ ಕೊಡುವೆನು ದುಃಖವ ಬಿಟ್ಟು
ದಮ್ಮಯ್ಯ ನುಡಿಯೈ ಕಾರಣವ ೧೭

ಈ ಪರಿ ಶೋಕವೇತಕೆಯೆನ್ನ ಮನ ಬಹು
ತಾಪವ ಪಡೆಯುತಲಿಹುದೈ
ಏ ಪಸುಳೆಯೆ ಮುಖಬಾಡಿತೆನ್ನಾನೆಯೆ
ನೀ ಪೇಳು ದುಃಖಕಾರಣವ ೧೮

ನಿನ್ನ ಸಖನನಾಪಾತನ ರಾಜ್ಯದರಸನೆಂ
ದೆನ್ನಿಸಲಯ್ಯ ನಾ ಮುದದಿ
ನಿನ್ನ ಕಂಡರೆ ನೇರದವರನಾರನು ಈಗ
ನಿನ್ನ ನುಡಿಸದಂತೆ ಮಾಳ್ಪೆ ೧೯

ಆವಾವ ಪರಿಯು ಮನ್ನಿಸಿ ಕೇಳ್ದರಾ ಸುತ
ತಾ ವಚಿಸದೆಯಳುತಿರಲು
ಭಾವೆ ಸುನೀತಿಯೊಡನೆ ಕೆಲಬಲದೊಳಿ
ಪ್ಪ ವನಿತೆಯರುಸುರಿದರು ೨೦

ಕೇಳಮ್ಮ ತಾಯೆ ಸುನೀತಿ ನಿನ್ನಣುಗನ
ಬಾಲಕರಾ[ರು ಕೋಪವನು]
ತಾಳುತಲೆನ್ನಲಿಲ್ಲತಿ ಕಠಿಣೋಕ್ತಿಯು
ಪೇಳುವೆವೀ ಶೋಕಬರವ ೨೧

ಮನದೊಳಗಾವ ಭೂಷಣವು ಬೇಕೆಂಬುದು
ತನಯುನಿಗಿಲ್ಲ ಆನೆಯನು
ಘನಮಹೋತ್ಸವದಲಾಡಿಸಲೆಂಬುದಿಲ್ಲ ಕೇ
ಳ್ವನಿತೆ ಪೇಳ್ವೆವು ಶೋಕಬರವ ೨೨

ತನಗತಿ ಪ್ರಿಯರಾದರನ್ನು ರಾಜ್ಯಾಧಿಪ
ರೆನಿಸಲೆಂಬುದು ನಿನ್ನ ಸುತನ
ಮನದೊಳಿವಾಗದನ ಬೈಯನ್ನನು (?)
ವನಿತೆ ಕೇಳುಸುರುವೆವಿದನು ೨೩

ವಾಸುದೇವನ ಮೂರುತಿಯು ಪ್ರೊಳೆಯುತಲಿಪ್ಪ
ಲೇಸಾದ ಪದಕವ ನೀನು
ವಿ ನುತ ಕೊಡುವೆನೆನ್ನುವೆ ಬಾಲ ಮನದೊಳು
ಕ್ಲೇಶಿಪುದನು ಕೇಳ್ಕೇಳುವೆವು ೨೪

ಮೆಲ್ಲಬೇಕಾದಂಥ ವಸ್ತುವ ನಿನ್ನಿಂದ
ಉಲ್ಲಾಸದಿಂದ ಕೊಳ್ಳುವದು
ಇಲ್ಲಿವಾ ಸುತನ ಚಿತ್ತದೊಳು ರೋದಿಸುವುದ
ನೆಲ್ಲವ ಪೇಳ್ವೆವು ಕೇಳು ೨೫

ದುರುಳವಾಕ್ಯವದೆಂಬ ಶರವೇಧೆಯೊಳು ನೆಟ್ಟು
ಮರೆದಂಗ ಸುಖವನೀ ಬಾಲ
ತರುಣಿ ನಿನ್ನೊಳು ಪಾತನೊರೆವೆನೆಂದಪೆಯುಕ್ಕೆ
ಇರುವದದನೆ ಪೇಳುವೆವು ೨೬

ನೆರೆಕೇಳ್ ಸವತಿಯಾದ ಸುರುಚಿಯು ಸುತನನ್ನು
ಧರಣೀಶ ತನ್ನ ತೊಡೆಯೊಳು
ಹರುಷದಿಂ ಕುಳ್ಳಿರಿಸಿಕೊಂಡು ಮುದ್ದಾಡುತ
ಲಿರುವುದ ಕಂಡ ನಿನ್ನಣುಗ ೨೭

ತಾನು ತಂದೆಯು ಸನಿಯವನೈದಿ ಎನ್ನನು
ನ್ನೀನೆತ್ತಿಕೊಂಡು ಪೋದದೊಳು
ಮಾನಸದತಿ ಪ್ರೀತಿಯನ್ನೂಡಿಸೆನ್ನುತ
ಈ ನಿನ್ನ ಸುತನು ಕೇಳಿದನು ೨೮

ಆವಾವ ಪರಿಯಲಿ ಬಾಲಕ ಕೇಳಿದ
ಡಾ ವಸುಧೀಶ ಮನ್ನಿಸದೆ
ಭಾವೆ ಸುರುಚಿಯು ಸುತನನಾಡಿಸುತ ಮುಖ
ದಾವರೆಯನ್ನೋರೆಗೈದ ೨೯

ಸುತನನಾಡಿಸಲು ಸುರುಚಿಯು ಚಿತ್ತದಿ ತಾನು
ಖತಿಯ ತಾಳ್ವಳೊ ಸುಮ್ಮನಿಹಳೊ
ಅತಿಮುದ ಪಡೆವಳೊ ಎಂಬ ಸಂಶಯದಿ ಭೂ
ಪತಿ ಮಾತನಾಡದೆ [ಯಿರ್ದ][1] ೩೦

ರಾಯ ನಿನ್ನಣುಗನ ನುಡಿಸದಿರ್ಪುದ ಕಂಡು
ಬಾಯಿಗೆ ಬಂದ ತೆರದಲಿ
ನೀ ಯಾತಕಾನೆಪಡುವೆ ಮರುಳೆ ಎನ್ನು
ತಾಯತಾಕ್ಷಿಯು ಘರ್ಜಿಸಿದಳು ೩೧

ಹೋಗತ್ತ ನಿನ್ನ ಮನ್ನಿಪರಾರು ರಾಯನಿ
ಗೀಗಿಲ್ಲ ನಿನ್ನವ್ವೆ ಮೇಲೆ
ರಾಗವು ಎನ್ನಲೀ ಬಾಲಕ ಬಳಲಿದ
ಏ ಗಜಗಮನೆ ನೀ ಕೇಳೇ ೩೨

ಕಿರಿಯವಳಿರಲು ಪೂರ್ವವ ರಮಣಿಗೆ ಸುಖ
ಬರುವುದೆ ಅವಳ ಮಕ್ಕಳನು
ಹರುಷದಿಂ ನುಡಿಪರೆಯೆನಲು ಬಾಲಕನಿವ
ಮರುಗುವನದರಿಂದ ಕೇಳು ೩೩

ಪೇಳಲಾ ನಾರಿ ಧಿಕ್ಕರಿಸಿದ ಪರಿಯನು
ತಾಳುವುದೆಮ್ಮಯ ಚಿತ್ತ
ನೀಳವಾಗಿಹ ಶೋಕವನು ಬಾಲಕನೆಂತು
ಕೇಳಮ್ಮ ಸಹಿಸುವ ತಾನು ೩೪

1 ಸುಮ್ಮನಿರ್ದ

ಮಾತೆಯು ಬೈದಳೆಂತೆಂಬ ಶೋಕಪದೊಂದು
ತಾತನು ಪ್ರಿಯದಿ ತನ್ನುವನು
ಮಾತನಾಡಿಸದೊಂದೆರಡರಿಂ ಬಾಲನೀ
ರೀತಿಯೊಳಳುವ ಕೇಳಮ್ಮ ೩೫

ಎಂದಿಂತೆಲ್ಲವನಲ್ಲಿಯಿರುವ ನಾರಿಯರತಿ
ನೊಂದು ಚಿತ್ತದೊಳಿದ ವೇಳೆ
ಇಂದುವದನೆ ಅಗ್ನಿಯುರಿಯಿಂದಲತ್ಯಂತ
ಕಂದಿದ ಲತೆಯೋಲ್ ಬಾಡಿದಳು ೩೬

ನಾರಿಯರುಸುರಿದುಕ್ತಿಯು ಬಾಣವೆದೆಯನ್ನು
ಮೀರಿ ಬೆನ್ನೊಳು ಮೂಡಲಾಗಿ
ಧಾರುಣಿಯೊಳು ತನು ಮರೆದೊರಗಿದಳಾಗ
ನೀರೆ ತಾ ಕಡು ಮೂರ್ಛೆಯಿಂದ ೩೭

ಒತ್ತಿನೊಳಿರ್ದ ಬಾಲೆಯರುದಕವ ತಂದು
ಒತ್ತಲಂಬಕ ಹೃದಯಕ್ಕೆ
ಮತ್ತೆ ಚೇತರಿಸಿ ಕಣ್ತೆರೆದು ಸುನೀತಿಯು
ಪುತ್ರನ ಕಂಡಳಳಲಿದಳು ೩೮

ಎಡಬಲದೊಳಗಿರುತಿರ್ದ ಬಾಲೆಯರೊಳು
ಮಡದಿ ಶೋಕದಿ ಕುದಿಕುದಿದು
ನುಡಿದಳೆನ್ನಯ ಬಾಳ ಕಂಡಿರೆ ನೀವೆಂದು
ಕಡುತಾಪದಿಂದ ಸುನೀತಿ ೩೯

ಕೇಳ್ದಿರೆ ನೀವೀಗಲೆನ್ನ ಸವತಿ ತಾನು
ತಾಳ್ದ ಕೋಪವ ಎನ್ನ ಸುತನ
ಬಾಳ್ದವೆಯಾ ನಡೆಯಾಸೆ ಯಾತಕ್ಕೆಂದು
ಪೇಳ್ದ ಕ್ರೂರೋಕ್ತಿಯ ಕೃತಿಯ ೪೦

ತನ್ನಣುಗನ ರಾಜ ಕರೆದು ತೊಡೆಯಮೇಲೆ
ಉನ್ನತಪ್ರಿಯದಿ ಕುಳ್ಳಿರಿಸಿ
ಮನ್ನಿಸುತಿರಲೆನ್ನ ಸುತ ಕಂಡು ಕೇಳ್ದಡಿಂ
ತೆನ್ನಬಹುದೆ ಕಠಿಣವನು ೪೧

ಪಾಪಿಗಳೆಂಬರಿಲ್ಲವೆ ಜಗದೊಳು ಕಡು
ಪಾಪಿಗಳ್ ಲೋಕದಿ ನಾವೇ
ಪಾಪಿ ಸುರುಚಿಯೆನ್ನ ಸುತನನು ಬೈದಳು
ತಾ ಪಡೆಯಲಿ ಸುಖವನ್ನು ೪೨

ದೈವಬಲವು ಮಾನವಬಲವೆರಡರೊ
ಳಾವ ಬಲವುಯಿಲ್ಲವೇನೋ
ತಾ ವಸುಧೀಶನಿಗತಿ ಪ್ರಿಯಳಾದಡೆ
ನೀವಾಗಿ ಪಂಥವದೇಕೆ (?) ೪೩

ತನ್ನ ಬಸುರಿನೊಳು ಎಸೆದ ಸುತನನ್ನು
ಮನ್ನ[ಣೆ]ಯಿಂದಲಾ ರಾಯ
ಇನ್ನು ಹೆಚ್ಚಿಸಲಿ ಬೇಡೆಂಬೆನೆ ತನಗೀಗ
ಎನ್ನಣುಗನ ದಾರಿ ಯಾಕೆ ೪೪

ಎನ್ನನು ನಿರ್ಭಾಗ್ಯಳೆಂದು ತಾ ಬೈವುದು
ತನ್ನಿಚ್ಛೆಯಲ್ಲವು ಕೇಳೀ
ಎನ್ನ ಪಣೆಯೊಳ್ವಿಧಿ ಬರೆದನೀ ವಿಧದೊಳ
ಗಿನ್ನು ಶೋಕಿಸಲೇತಕದಕೆ ೪೫

ಮಗನೆ ಕೇಳ್ ನಿನ್ನ ಚಿಕ್ಕಮ್ಮೆಯಾಡಿದ ಮಾತಂ
ನಿಗದಿ ತಾ ನಿರ್ಭಾಗ್ಯಳಹುದು
ಬಗೆಯಿದೆ ನೋಡು ಶೋಕಕೆ ನೆಲೆಯಾಗಿ ಈ
ಜಗದೊಳ್ ನಾ ಭಾರವಾಗಿಹುದ ೪೬

ಧರವೆ ನಿನಗೆ ಸಿರಿವಂತೆ ಮಕ್ಕಳ ಕೊಡೆ
ನರಿಯಾಗಿ ಬಾಳೆನ್ನುವನು
ಪರಮ ಪಾತಕಿಯಾದನ್ನುವರವಿ ಒಂದು ನೀ
ಮರುಗುವ ಯಾತಕೆ ಮಗನೆ ೪೭

ಎನ್ನನು ನಿನ್ನ ಜನಕ ನಾಲುವರ ಮುಂದೆ
ತನ್ನರಸಿಯು ಎನ್ನುವದಕೆ
ಚೆನ್ನಾಗಿ ನಾಚುವನಿಂಥ ನಿರ್ಭಾಗ್ಯಳಾ
ದೆನ್ನುವರವಿ ಪುಟ್ಟಿಬರುವೆ ೪೮

ಅ[ಪ್ಪನ] ಪೇಳಿದಕೆನ್ನಿನ್ನು ತಂದೆಯ
ತೊಟ್ಟಿಲಕೆನ್ನೀ ಪ್ರವೇಶವನು
ಪ[ಟ್ಟದ] ಗದ್ದುಗೆಯೊಳು ಮಂಡಿಸುವಾಸೆ
ಬಿಟ್ಟಿಡೆ ಒಪ್ಪುದೆ ಮಗನೆ ೪೯

ನಾಡೊಳಗಿಹ ಪರದೇಶಿ ಹುಡುಗರೊಡ
ನಾಡದೆ ಸಿರಿವಂತೆ ಮಗನ
ಕೂಡೆ ಬಾಳುವೆನೆಂದೈದಿದರೆ ತನುಜ ನಿನ್ನ
ನೀಡೇರಿಸುವರೆ ಕೇಡಿಗರು ೫೦

ಸುರುಚಿಯಂದದು ಪ್ರಸಿಯುಳ್ಳ ಪೂರ್ವದಿ ನಾವು
ಪರರಿಗೆ ಲೇಶಮಾತ್ರವನು
ಕರದಿಂದ ಕೊಟ್ಟುದಿಲ್ಲವಿಂದಲೀ ಸಿರಿ
ಬರುವುದೆಂತೆನ್ನಯ ಕಂದ ೫೧

ಇಂತು ಬಹಳ ಪ್ರಳಪಿಸುತ ಸುನೀತಿ ತ
ನ್ನಂತರಂಗದಲಾಲೋಚಿಸುತ
ಮುಂತಹ ಕಾರ್ಯಕೋಸುಗ ಬಹು ನೀತಿಗ
ಳಂ ತೊಡಗಿಯೆ ಬೋಧಿಸಿದಳು

ನಿರುತವೀ ಧ್ರುವನ ಚರಿತೆಯನು ಭಕ್ತಿಯಿಂ
ಬರೆದೋದಿ ಕೇಳಿದ ಜನರ
ವರಚಿಕ್ಕನಾಗಪುರದ ವೆಂಕಟೇಶನು
ಪೊರೆವನು ಸುಖವಿತ್ತು ದಯದಿ ೫೩

# ಕೃಷ್ಣನ ಕರುಣವ ಪಡೆಯಯ್ಯ ಮಗನೆ

ಕೇಳಿಲೆ ರಾಜ ಸುನೀತಿ ತನ್ನಣುಗಗೆ
ವೇಳಿದಳಖಿಳ ಬುದ್ಧಿಯನು
ಶ್ರೀಲೋಲವಾಸುದೇವನ ಪಾದಪದ್ಮವ
ನೋಲಗಿಪಂತೆ ವಿಸ್ತರದಿ ೧

ಬಾಲಕ ಕೇಳು ನಿನ್ನನು ಸುರುಚಿಯು ತಾನು
ತಾಳಿ ಕೋಪವ ಕರಿಣದಲಿ
ಪೇಳಿದಳೆಲ್ಲುಪದೇಶ ಮಾರ್ಗವು ನೀನು
ಬಾಳೂವರಾಧಾರ ಮಗನೇ ೨

ಇಹಲೋಕ ಭೋಗವು ನೆಲೆಯಾಗಿ ಬಹುದಿನ
ವಿಹುದಲ್ಲವಿದಕೀಗ ನೀನು
ಬಹಳಾಸೆಪಡಲು ಪೇಳಿದಳು ಮುಂದಣ ಸುಖ
ವಹ ಮಾರ್ಗವನು ಕೇಳ್ ಮಗನೆ ೩

ನರರ ಮನ್ನಣೆ ಎಲ್ಲೀತನಕ ಬಪ್ಪುದು ನಿನ
ಗಿರದೆ ಕಾನನಕೈದಿ ತಪವಾ
ಚರಿಸಿ ಶ್ರೀವಾಸುದೇವನ ದಯವಡೆಯೆಂದು
[ಒರೆ]ದಳು ನಿನಗೆ ಕೇಳ್ಮಗನೆ ೪

ಎನ್ನ ನಿರ್ಭಾಗ್ಯ [ಯೆಂ]ದುದು ನಿಜ ಕೇಶವ
ನನ್ನು ಭಾವಿಸುಯೆಂದು ನಿನ್ನ
ಎನ್ನದೆ ನಾನು ಸುಮ್ಮನೆಯಿಹುದನು ಕಂಡು
ನಿನ್ನೊಡನೆಂದ[ಳ್] ಕೇಳ್ಮಗನೆ. ೫

ಪೂರ್ವಜನ್ಮದಿ ನೀನು ಕೊಡದೆ ದಾನವನೀಗ
ಓರ್ವನಿಗಾದರು ಕೇಳು
ಸಾರ್ವಭೌಮತ್ವವು ಬರುವುದೆಂತೆಲೆ ಬಾಲ
ಪಾರ್ವುದೆಂತಕಟ ದಾರಿದ್ರ್ಯ ೬

ನಿತ್ಯವಲ್ಲದ ಭೋಗಕತ್ತು ಬಳಲಬೇಡು
ದುತ್ತಮುನವ್ವೆ ಹಿತವನು
ಬಿತ್ತರಿಸಿದಳು ನಿನಗೆ ವಾಸುದೇವನಿಂ
ದುತ್ತಮವರ ಪಡೆಯೆಂದು ೭

ಮಾತೆಯಲ್ಲವೆ ಸುರುಚಿಯು ನಿನಗವಳುಕ್ತಿ
ತಾ ತಪ್ಪದಯ್ಯ ನೀ ಮುದದಿ
ಪಾತಕಹರ ವಾಸುದೇವನಂಘ್ರಿಯ ಭಜಿ
ಸಾತನೊಲಿದು ರಕ್ಷಿಸುವನು ೮

ನಿನ್ನಯ ತಾತನಾವಾತನ ಪದಪದ್ಮ
ವನ್ನು ಭಾವಿಸಿ ಮನದೊಳಗೆ
ಉನ್ನತ ಸುಖವ ಸಾಧಿಸಿದನಾ ದೇವನ
ಚೆನ್ನಾಗಿ ಭಜಿಸು ರಕ್ಷಿಸುವ ೯

ಕಮಲಸಂಭವನಾವ ದೇವನ ಬಲದಿಂದ
ಅಮರಿ ನಿರ್ಮಿಸುವನೀ ಜಗವ
ವಿಮಲ ಚಿತ್ತದಲಿ ನೀನಾದೇವನಂಘ್ರಿಗೆ
ನಮಿಸು ರಕ್ಷಿಸುವನು ಬಿಡದೆ ೧೦

ತರಣಿ ಪಾವಕ ಚಂದ್ರರಾವಾತನಾಜ್ಞೆಯಿಂ
ನಿರುತ ತೇಜಿಷ್ಠರಾಗಿರುತ
ಪೊರೆವರಖಿಳ ಲೋಕಗಳನು ನೀನಾದೇವ
ಗೆರಗು ರಕ್ಷಿಸುವನು ಬಿಡದೆ ೧೧

ಅಷ್ಟದಿಕ್ಪಾಲಕರಾವ ದೇವನ ಬಹು
ಕಟ್ಟಳೆಯಿಂದ ಲೋಕವನು
ದಿಟ್ಟರಾಗಿಯೆ ಪಾಲಿಪರೊ ನೀನಾತನ
ಮುಟ್ಟಿ ಭಜಿಸು ರಕ್ಷಿಸುವನು ೧೨

ಸಾಧನಲ್ಲವೆ ಹರಿ ಯಾರು ಇಲ್ಲದರಿಂಗೆ
ಪಾತಕಹರ ವಾಸುದೇವ
ತಾತ ನಿನಗೆ ಆ ದೇವನಲ್ಲದೆ ಕಾಣೆ
ಭೂತಳದೊಳಗೆ ಪೋಷಕರ ೧೩

ಬಲವಿಲ್ಲದವರ ಶ್ರೀ ವಾಸುದೇವನು ತಾನು
ಬಲವಾಗಿ ರಕ್ಷಿಸುತಿಹನು
ಎಲೆಸುತ ನೀನಾತನಂ[ಫ್ರಿಯು]ನೆನೆ ಸುಖ
ಜಲಧಿಯೊನ್ನಿಸುವ ನಿನ್ನುವನು ೧೪

ಪರಿಪರಿ ಶಾ[ಸ್ತ್ರ] ಪುರಾಣ ತರ್ಕಗಳೋದಿ
ಅರಿದದರಿಂ ತಪಗೈದು
ಅರಿಯುರಾ ವಾಸುದೇವನ ಭಕ್ತಿಯಿಂ ಕಾಣ್ಬ
ನರರಂತೆ ನೀ ಕೇಳಂ ಮಗನೆ ೧೫

ಸದ್ಧರ್ಮನಿಷ್ಠರಾಗಿಯೆ ಬಹಂತರಜ್ಞಾನ
ವೃದ್ಧರಾಗಿಹ ಯೋಗಿವರರ
ಹೃದ್ದೇಶದಲಿ ಪೊಳೆವನ ಭಜಿಸೈ ಭಕ್ತ
ಬದ್ಧಚಿತ್ತನು ನೀನೆಂದೆನಿಸಿ ೧೬

ಸಂಗವನೆಲ್ಲವ ತೊರೆದು ಕಾಡೊಳು ನೆಲ
ಕುಂಗುಟಮಾತ್ರವನೂರಿ
ಹಿಂಗದೆ ತಪಗೈವರರಿಯುರಾತನ ಭಕ್ತ
ಸಂಗನು ನೀ ಕೇಳು ಮಗನೆ ೧೭

ಮಾತೆ ಸುರುಚಿ ನಿನ್ನನಡವಿಗೆ ಪೋಗೆಂದ
ಮಾತ ಕಠಿಣವೆಂದು ಮನಕೆ
ನೀ ತಾರದುಪದೇಶವೆಂದು ಭಾವಿಸು ಹರಿ
ತಾ ತಂದೆಯಾಗಿ ರಕ್ಷಿಸುವ ೧೮

ಒಂದು ಬಾರಿಯು ನೆನೆದಡೆ ಮಾತೆ ತನ್ನಯ
ಕಂದನನರಸುವ ತೆರದಿ
ಬಂದು ಹತ್ತಿರಕೆ ಮದ್ಭಕ್ತರತ್ನವೆ ಬಾಯೆಂ
ತೆಂದಪ್ಪಿ ಸಲಹುವ ಮಗನೆ ೧೯

ಪರರ ಸುಖವ ನೀನು ಕಂಡು ಮಾನಸದೊಳು
ಕರುಬದೆ ಆಲಸ್ಯವನ್ನು
ಧರಿಸದಸೂಯೆಯಿಂ ಪರರ ನಿಂದಿಸದೆ ನೀ
ನಿರು ವಾಸುದೇವ ರಕ್ಷಿಪನು ೨೦

ಉಂಟಾದ ಧನ ಮೊದಲಾದುದರಿಂದಲಿ
ಕಂಟಕರಿಲ್ಲದೆ ಸುಖದಿ
ನಂಟರೊಡನೆ ಬಾಳ್ವರು ಕಂಡಳಲ್ವನ
ನಂಟೊತ್ತಿಬಿಡುವ ಶ್ರೀಹರಿಯು ೨೧

ಕಾಮಕ್ರೋಧವು ಲೋಭಮೋಹ ಮದವು ಮತ್ತೆ
ಭೀಮಮತ್ಸರವೆಂಬೀವಾರು
ಈ ಮಹೀಸುಖ ಪರಲೋಕವ ಪಡೆಯಂದೊಲ್
ಹೋಮಿಪವೈ ತಮ್ಮೊಳಿಹರ ೨೨

ಕೋಪವೆಂಬುದು ಸರ್ವಸುಖನಾಶಕಾರಣ
ಕೋಪದಿಂ ತಪವು ತಾ ಕೆಡುಗು
ಕೋಪದಿಂದಿಹಪರಲೋಕ ಹಾನಿಯು ಒಮ್ಮೆ
ಕೋಪಗೈಯಲಿಬೇಡ ಮಗನೆ ೨೩

ಕಾಮಿ[ಸದಿರು] ಪರಧನವ ಕಂಡಡೆಯೊಮ್ಮೆ
ನೀ ಮನದೊಳಗೆ ನಿಂದೆಯನು
ಭೂಮಿಯೊಳಿಹರೊಳು ಬಗೆಯ[ದಿರಾ]ವಗ
ವೇ ಮನ್ಮನಾಬ್ಜ ಭಾಸ್ಕರನೆ ೨೪

ನಿನ್ನ ದುಃಖಾಗ್ನಿಯನಚ್ಯುತನಲ್ಲದೆ
ತಣ್ಣನೆ ಮಾಳ್ಪರನೀಗ
ಅನ್ಯರ ಕಾಣೆನೀ ಧರಣಿಯೊಳಿಲೆ ಬಾಲ
ಎನ್ನಯ ನುಡಿಯ ನೀ ಕೇಳು ೨೫

ಮರುಗದೆ ಮನದಿ ಹಿಂದೆಗೆದು ಯೋಚಿಸದೆ ನೀ
ಹರುಷದಿಂದಟವಿಗೆ ಪೋಗಿ
ಕರಕಷ್ಟ ತಪವನಾದರು ಮಾಡಿ ಕೃಷ್ಣನ
ಕರುಣವ ಪಡೆಯಯ್ಯ ಮಗನೆ ೨೬

ಕಾಡೊಳು ನಿಂದು ತಪಿಪ ನಿನಗತಿ ವಿಘ್ನ
ಕಾಡಲಿಬೇಡ ಶ್ರೀಹರಿಯು
ಕೊಡಲಿ ದಯದಿ ನೀ ಬಯಸಿದುದೆಲ್ಲವ
ನೀಡಲಿ ಬಿಡದೆ ಪೋಷಿಸಲಿ ೨೭

ನಿನಗೆಲ್ಲ ನಿರ್ವಿಘ್ನವಾಗಿ ಕೈಗೂಡಲಿ
ವನಿತೆ ಸುರುಚಿಯಾಡ್ದ ಮಾತು
ದಿನಪನುದಿಪ ಕಾಲದೊಳು ಹರಸಿದುದಾಗ
ಲನುಪಮ ಹರಿ ತಾನೊಲಿಯಲಿ ೨೮

ಕರುಣದಿಂ ಶಿಶುವನಂ ಜನನಿ ಪೋಷಿಸುವಂತೆ
ಧರಣೀದೇವಿಯುಂ ನೀನಿದ್ದಲ್ಲಿ
ಪೊರೆಯಲಿ ಕ್ಲೇಶವೆಂಬುದು ತೋರದತಿಸುಖ
ಕರವಾಗಲಡವಿ ಕೇಳ್ ಮಗನೆ ೨೯

ಸತ್ಯ ಮಾತೆಯು ಜ್ಞಾನ ಜನಕ ಧರ್ಮವ್ರಯೆಂತೆಂ
ಬುತ್ತಮ ಭ್ರಾತೃ ನಿನ್ನುವನಂ
ಒತ್ತಿಲಿರುತಲೆಡೆಬಿಡದೆ ಪೋಷಿಸಲಿ ಸ
ರ್ವತ್ರ ಗೋಪಾಲನೊಲಿಯಲಿ ೩೦

ಶರಣು ಪೊಕ್ಕರ ಬಿಡದನಿಶವು ಪೊರೆವೆನೆಂ
ಬುರುತರ ಬಿರುದುಳ್ಳ ಹರಿಯು
ಕರುಣದಿಂ ನಿನ್ನ ದುರಿತಗಳನೆಲ್ಲವ
ಪರಿದು ತಾ ಸಲಹಲಿ ಮಗನೆ ೩೧

ಚಿತ್ತದೊಳೀವೆನೆಂದೊಮ್ಮೆಯಾಳೋಚಿಸ
ದುತ್ತಮ ಚರಿತನಂಘ್ರಿಯನು
ಭೃತ್ಯವತ್ಸಲ ಸಲಹೆಂದು ಭಾವಿಸು ವರ
ವಿತ್ತು ರಕ್ಷಿಪ ಸಿದ್ಧ ಮಗನೆ ೩೨

ಈ ವಿಧದುಪದೇಶ ಗೈದಳಾತ್ಮಜನೆಂದು
ಭಾವೆಸುನೀತಿ [ಪೃಥ್ವಿ] ಯೊಳು
ದೇವನೆ ಗತಿಯೆಂದು ಧ್ರುವ ತನ್ನ ಚಿತ್ತದಿ
ಭಾವಿಸಿ ಮುದವ ತಾಳಿದನು ೩೩

ಜನನಿಯು ಬುದ್ಧಿವೇಳಿದ ವಾಕ್ಯವೆಂಬ ಚಂ
ದ್ರನು ಧ್ರುವಚಿತ್ತ ಸಾಗರವ
ಘನವಾಗಿ ಹೆಚ್ಚಿಸಿ ಹರುಷಭರಿತನಿವ
ನೆನಿಸಿತಾ ಮಹಿಮೆ [ಯೇನೇಳ್ವೆ]* ೩೪

* ಯೋಳ್ವೇಲ್ವೆ

ನಿರಂತರವೀ ಧ್ರುವನ ಚರಿತೆಯನು ಭಕ್ತಿಯಿಂ
ಬರೆದೋದಿ ಕೇಳಿದ ಜನರ
ವರಚಿಕ್ಕನಾಗಪುರದ ವೆಂಕಟೇಶನು
ಪೊರೆವನು ಸುಖವಿತ್ತು ದಯದಿ ೩೫

## ಸುನೀತಿ ವಾಸುದೇವನ ಸ್ತುತಿಸಿದಳು

ಕೇಳೆಲೆ ರಾಜ ಸುನೀತಿ ತನ್ನಣುಗಗೆ
ಪೇಳಿ ಬುದ್ಧಿಯ ಮತ್ತೆ ಸುತನು
ಶ್ರೀಲಕ್ಷ್ಮಿಯರಸನನೊಲಿಸಲೈದುವುದ ಕಂ
ಡಾ ಲಲನೆಯು ಯೋಚಿಸಿದಳು ೧

ಮಗನೆ ನೀನಡವಿಯೊಳಿಹೆಯೆಂತದೋರ್ವನೆ
ಮೃಗಪತಿ ಶರಭ ಭೇರುಂಡ
ಅಗಣಿತವಾಗಿಯಿರ್ಪವು ಕಂಡು ಬೆದರದೆ
ಮಿಗೆ ಧೈರ್ಯವಿಡಿವೆಯೆಂತಕಟಾ ೨

ಮನೆಯ ನೆಳಲೊಳಾಡುತಿರ್ದರು ಬಳಲುವೆ
ಬನದೊಳಗೆಂತು ಹಸಿವನು
ಘನತರ ತೃಷೆಯನು ಸಹಿಸುವೆಯೆಂತು ಜೀ
ವನ ಮಾತ್ರವಲ್ಲದಿನ್ನಿಲ್ಲ ೩

ಗೆಡ್ಡೆ ಗೆಣಸು ಫಲ ಜಲ ಮಾತ್ರವಾಹಾರ
ಕಡ್ಡಿ ತೃಣದಿ ಮತ್ತೆ ಶಯನ
ಗುಂಡ್ಡ ಕಮರಿಯಿಪ್ಪ ವನದೊಳು ಹರಿಗೆ ನೀ
ನಡ್ಡಬೀಳುವೆಯೆಂತು ದೃಢದಿ ೪

ಹಾಲನುಂಡಾಡುವ ಹರಯದಿ ವನದೊಳು
ನೀಳವಾಗಿಯೆ ತಪಗೈವ
ಶೀಲ ತಾನೊದಗಿದುದೆಂತು ಸೈರಿಸುವೆಯ್ಯೆ
ಬಾಲ ನೀನೊರ್ವನೆ ದೃಢದಿ ೫

ಈ ವಿಧದಲಿ ಹಳಹಳಿಸುತ ಯೋಚನೆ
ಭಾವ [ಬೇ]ರಾಗಿ ತೋರಲ್ಕೆ
ಶ್ರೀ ವಾಸುದೇವನ ಚರಣಪಂಕಜಗಳ
ಭಾವಿಸಿದಳು ಭಕ್ತಿಯಿಂದ ೬

ಶ್ರೀ ವಾಸುದೇವ ಕೃಪಾವನಧಿಯೆ ಕೃಷ್ಣ
ದೇವಾಧಿದೇವ ಮುಕುಂದ
ಭಾವಜ ಜನಕ ಭದ್ರಾಕಾರ ಮುಕುಂದ
ಪಾವನ ಚರಿತ ಮಾಂ ಪಾಹಿ ೭

ದುರಿತ ಶರಧಿ ಬಡಬಾನಲ ಪಾಪಸಂ-
ಹರ ನಾರಾಯಣ ಲಕ್ಷ್ಮೀನಾಥ
ತರುಣನ ನಿನ್ನ ಚರಣ ಸರಸಿರುಹಕ್ಕೆ
ನೆರೆಯೊಪ್ಪಿಸಿದೆನೊ ಗೋವಿಂದ ೮

ನೀನೆಯಲ್ಲದೆ ಗತಿ ಬೇರಿಲ್ಲವೆಂದೀಗ
ನಾನು ಎನ್ನಯ ಸುತನನ್ನು
ಶ್ರೀನಾಥ ನಿನಗೆ ಒಪ್ಪಿಸಿದೆ ಪಾಲಿಸು ಕರು
ಣಾನಿಧಿಯೆ ಕಮಲಾಕ್ಷ ೯

ದಿಕ್ಕಿಲ್ಲ ನೀ ಕೃಪೆದೋರದೆ ಬಿಡಲೀಗ
ಲಕ್ಕರದಿಂದೆನ್ನ ಸುತನ
ಅಕ್ಕಿಯು ಪರಿಹರಿಸುವ[ರೆ] ನೀನದರಿಂದ
ಚಿಕ್ಕವನಂ ಕಾಯ್ದುಕೊಳ್ಳೈ ೧೦

ಧರಣಿಯೆ ಜನನಿ ನೀನೆ ತಂದೆಯಲ್ಲದೆ
ನೆರೆಕಾಣೆನನ್ಯವನಿನ್ನು
ತರುಣನಿಗೆಲೆ ಜಗನ್ನಾಥ ನೀನದರಿಂದ
ಕರುಣದಿಂದಣುಗನ ಸಲಹೈ ೧೧

ನಾಥನಲ್ಲವೆ ನೀನು ಮೂಲೋಕದೊಳಗೆಯು
ನಾಥರಾದರಿಗೆಲ್ಲ ಹರಿಯೆ
ಪಾತಕಹರ ವಾಸುದೇವ ಮನ್ಮಥ ಪಿತ
ಈ ತರುಣನ ಕಾಯ್ದುಕೊಳ್ಳೈ ೧೨

ಮಾತನಾಡುವುದನರಿಯನು ಮನೆಯೊಳಿರ್ದ
ಡೀ ತರುಣನು ಬಳಲುವನು
ತಾ ತಾ[ಳ್ವನೆ]ಂತಟವಿಯೊಳತಿ ಕಷ್ಟವ
ನೀ ತಂದೆಯಹಾಗಿ ಪಾಲಿಪುದು ೧೩

ಬರಿದೆ ನಾನಾ ಪರಿಯಲಿ ಮೂಢಭಾವದಿಂ
ದರಿಯದೆ ಹಂಬಲಿಸುವೆನು
ಶರಣು ಹೊಕ್ಕರ ಬಿಡದತಿದಯದಿಂ ಕಾಯ್ವ
ಕರುಣಾಬ್ಧಿ ನೀನಿರುತಿರಲು ೧೪

ಧರೆಯೊಳಿನ್ನಾರ ಕಾಣೆನು ನಿನ್ನ ಚರಣ ವಂ
ಕರುಹಕೊಪ್ಪಿಸಿದೆನಣುಗನ
ಕರುಣದಿಂ ಪೊರೆ ಕೊಲ್ಲು ನೀನೆ ದಿಕ್ಕಲ್ಲದಿ
ನ್ನಾರಿಯೆನನ್ಯವ ವಾಸುದೇವ ೧೫

ಪಾವನ ಚರಿತ ಪರಾತ್ಪರ ಗೋವಿಂದ
ಶ್ರೀವಲ್ಲಭಾನಂತಕೃಷ್ಣ
ದೇವೇಶ ವಂದಿತ ಚರಣ ಪಂಕಜ ವಾಸು
ದೇವ ಮುಕುಂದ ಮಾಂ ತ್ರಾಹಿ ೧೬

---

* ಳೆ

ಚರಣಸೇವಕದೋಷ ಹರಣ ಲಕ್ಷ್ಮೀನಾಥ
ಕರುಣಾಸಾಗರ ಗಿರಿಧರಣ
ಶರಣುಹೊಕ್ಕೆನು ನಿನ್ನಕರುಣದೊಳಿರುವೆನ್ನ
ತರುಣನ ಕಾಯೆ ಚಕ್ರಧರಣ ೧೭

ಇಂದಿರಾವದನಾರವಿಂದ ಭಾಸ್ಕರ ಮುನಿ
ವೃಂದಸೇವಿತಪಾದದ್ವಂದ್ವ
ಕಂದರ್ಪಜನಕ ಮುಕುಂದ ಮಾಂ ಪಾಹಿ ಸು
ರೇಂದ್ರ ಸೇವಿತ ನಿತ್ಯಾನಂದ ೧೮

ಸೃಷ್ಟಿಕರ್ತನ ಪಿತ ನಷ್ಟಗೈಯೆನ್ನಯ
ಕಷ್ಟವನೆಲ್ಲವ ಕೃಷ್ಣ
ಸೃಷ್ಟಿಸಿರುವೆಯೆಮ್ಮ ವಿಷ್ಣುವೆ ವರಗಳ
ಕೊಟ್ಟು ರಕ್ಷಿಪುದೆಮಗಿಷ್ಟ ೧೯

ನಾರದಮುನಿವಂದ್ಯ ವಾರಿಜದಳನೇತ್ರ
ಘೋರ ದುರಿತ ಸಂಹಾರ
ನೀರಜ ಭವ ವಂದ್ಯ ಮಾರಜನಕ ದಯಾ
ಸಾರ ಮಾಂ ತ್ರಾಹಿ ಗೋವಿಂದ ೨೦

ನೀ ಕೃಪೆದೋರದಿರಲು ಹಸುಳೆಯು ಕಾಯ್ವ
ರೀ ಕುವಲಯದೊಳಗಿಲ್ಲ
ಪಾಕಶಾಸನವಂದ್ಯ ಸಲಹು ಕರುಣದಿಂದ
ಲೀ ಕಂದನನ್ನು ಗೋವಿಂದ ೨೧

ಇಂತೆಂದು ವಾಸುದೇವನ ಚರಣಾಬ್ಜವ
ಚಿಂತಿಸುತಾಗ ಸುನೀತಿ
ಮುಂ ತಾಹ ಕಾಯುಕೋಸುಗ ತರುಣಗೆ ಜ್ಞಾನ
ಮಂ ತಿಳಿವಂತೆ ಪೇಳಿದಳು ೨೨

ಆಲಸ್ಯಮಂ ಮಾಡದಿರು ಪುರಜನವೆಲ್ಲ
ಬಾಳುತಲಿರೆ ಕಂಡುಂ ನೀನು
ತಾಳದಿರೆನಗಿಲ್ಲವೆಂಬ ಯೋಚನೆಯು ಶ್ರೀ
ಲೋಲನ ಭಜಿಸು ಪಾಲಿಪನು ೨೩

ತನ್ನ ಚರಣಗಳ ಭಜಿಸಿ ತಾ ಕೊಡಲಾಗಿ
ಉನ್ನತ ಪದವಿಯು ಪರರು
ಚೆನ್ನಾಗಿ ಅನುಭವಿಪುದ ಕಂಡು ಮರುಗುವ
ನನ್ನ ರಕ್ಷಿಪುದಿಲ್ಲ ಹರಿಯು

೨೪

ನಿಗಮಂಗಳನಿಶವರಸಿ ಕಾಣದಿರುವವು
ಮಿಂಗೆ ಯೋಗಿಜನರು ಭಾವಿಸಲು
ಸೊಗಸಾಗಿಯುಳವಡದವನು ಭಕ್ತಿಯೊಳು ಕೈ
ಮುಗಿಯಲಾಕ್ಷಣವರಿಯುವನು ೨೫

ಸುರುಚಿಯಾಡಿದ ಮಾತನೊಂದನಾದ[ರು] ದುಃಖ
ಕರವೆಂದು ತಿಳಿಯದೆ ಮನದಿ
ಹರಿಚರಣಾಬ್ಜದ ಒಲವಿಗೆ ಮಾರ್ಗವ
ನರುಹಿದಳೆಂದು ನೀ ತಿಳಿಯೈ

೨೬

ಗುರುಹಿರಿಯರನು ಕಂಡೆರಗದೆ ನಡೆಯುದಿ
ರರಿಯದರೆಂದು ನೀ ಮನದಿ
ತರುಣತನದಿ ನಿಂದೆಗೈಯದಿರಖಿಳರೊಳ್
ಹರಿಯಿಹನೆಂದು ನೀ ತಿಳಿಯೈ

೨೭

ಸ್ಥಿರಚರ ಪ್ರಾಣಿಗಳೆಲ್ಲರೊಳಗು ನೀನು
ಪರರೆನ್ನರೆಂದು ಭಾವಿಸದೆ
ನೆರೆ ನಿಂದೆಗೈಯದಹಂಕರಿಸದೆ ಮತ್ತೆ
ಹರಿಯಿಹನೆಂದು ನೀ ತಿಳಿಯೈ ೨೮

ಸಕಲಶಾಸ್ತ್ರಂಗಳನರಿತ ವಿಪ್ರನೊಳುಮ
ತ್ತೃಷಿಳವಾಗಿಹ ಗೋವ್ರಗಳೊಳು
ಪ್ರಕಟವಾಗಿಯು ಗಜತುರಗಾದಿಗಳೊಳು ನೀ
ನಕಳಂಕ* ಹರಿಯನು ತಿಳಿಯೈ ೨೯

ನಾರಿಯೊಳ್ ಪುರುಷನೊಳ್ ಶೂದ್ರನೊಳ್ ಪಕ್ಕಿಯೊಳ್
ಚೋರನೊಳ್ ಶ್ವಾನದೊಳ್ಬಿಡದೆ
ನಾರಾಯಣನಿರುತಿಹನೆಂದು ತಿಳಿ ನಿನ್ನ
ತಾ ರಕ್ಷಿಸುವ ವಾಸುದೇವ ೩೦

ಕಾನನದೊಳಗಿಹೆನೆನಗಿಲ್ಲ ಬಲವೆಂದು
ನೀನು ಚಿತ್ತದಿ ಭಾವಿಸದೆ
ಶ್ರೀನಾಥನಿಹನು ಸರ್ವತ್ರವೆಂದಿರುತಿರು
ತಾನೊಲಿದಿಷ್ಟಗೊಡುವನು ೩೧

ರಾಜೀವನೇತ್ರ ಮುಕುಂದ ಜಗನ್ನಾಥ
ರಾಜೀವ ಸಖ ಶತತೇಜ
ರಾಜೀವ ಭವವಂದ್ಯ ನೀನೆ ದಿಕ್ಕೆನ್ನಲು
ರಾಜೀವನಾಭನೊಲಿವನು ೩೨

ಶ್ರೀಶ ಮಹೇಶ ಸುರೇಶ ವಂದಿತ ಭವ
ನಾಶ ಗಿರೀಶ ಸಖೇಶ
ವಾಸುದೇವನೆ ಎನ್ನ ನೀ ಸಲಹೆನ್ನುತ
ಲೇ ಸತತವು ನೆನೆ ಮಗನೆ ೩೩

ಜಲಜಸಂಭವ ಮೊದಲಾಗಿಯೆ ನೋಡಲು
ಶಲಭತನಕರ ಕಂಡೆಡೆಯು
ತಿಳಿಯೆಲ್ಲರೊಳು ವಾಸುದೇವನೆಯಿಹನೆಂದು
ಸುಲಭನಾಗುವನಯ್ಯ ನಿನಗೆ ೩೪

---

* ಯೆಂದು

ಕರಕಷ್ಟವೆ ಬಂದಡಳಲದೆ ಸುಖ ತಾನು
ಬರಲತಿ ಹೆಚ್ಚದೆ ಮನದಿ
ಪರರ ಕುಂಡೊಮ್ಮೆಯಾದರು ನಿಂದಿಸದಿರು
ಹರಿ ತಾನೆಯೊಲಿವನು ಮಗನೆ ೩೫

ಒಂದೆಲೆ ಒಂದೆ ಕುಸುಮ ಒಂದೆ ಫಲಮಾತ್ರ
ಕಂದ ಕೇಳಣುಜಲವನ್ನು
ಇಂದಿರಾಪತಿಯು ಕೋಯೆಂದು ಭಕ್ತಿಯೊಳೀಯು
ಲ್ಬಂದು ಹಿಗ್ಗುತ ಕೊಂಬ ಮಗನೆ ೩೬

ಆದರಿನಿಂದಲಿ ನೀನು ಮನದೊಳಾಲೋಚನೆ
ಯೊದಗಿದಡದನು ದಬ್ಬುತಲಿ
ಮಧುಸೂದನನ ಪಾದವ ಭಕ್ತಿಯಿಂದಲಿ
ಹೃದಯದಿ ಭಾವಿಸು ಮಗನೆ ೩೭

ಮರೆಯುಹೊಕ್ಕೆನು ನಿನ್ನನೆಂದೊಮ್ಮೆ ಮನದೊಳು
ಸ್ಮರಿಸಲು ಶ್ರೀ ವಾಸುದೇವ
ಕರುವನರಸುವೆಳೆಗಂದಿಯು ತೆರದಲಿ
ಬರುವ ನಿನ್ನೆಡೆಗೆ ಕೇಳ್ಮಗನೆ ೩೮

ಹರಿಯು ನೀ ಭಜಿಸುತಲಿರಲು ವಿಘ್ನವು ಬರೆ
ಪರಿಹರಿಪನು ನಿನಗದುವೆ
ಅರಿವುದೋರದ ತೆರದಲಿ ವಾಸುದೇವನು
ಕರುಣಾಸಾಗರನು ಕೇಳ್ಮಗನೆ ೩೯

ಇಂದಿರೆ ವೈಕುಂಠ ಚಕ್ರ ಶಂಖವು ಗದೆ
ಯಂದವಾಗಿರುವ ಕೌಸ್ತುಭವು
*[ಒ]ಂದಿರದಿರಲು ಸಹಿಸುವನು ಭಕ್ತರ
ನೊಂದು ಗಳಿಗೆ ಕಾಣದಿರನು ೪೦

---

* ಮ

ಈ ಪರಿ ಭಜಕವತ್ಸಲನಾದ ಹರಿಯನ್ನು
ಏ ಪಸುಳೆಯೆ ಕೇಳು ವನದಿ
ನೀ ಪೊಗಳಲು ವರವೀಯುವ ಕ್ಷಣದೊಳ
ಗೀ ಪೊಡವಿಯ ನೀ ಪಾಲಿಸುವೆ ೪೧

ಬಲವಿಲ್ಲವೆನಗಟವಿಯೊಳೊರ್ವನೆಯೆಂದು
ತಿಳಿಯಂದಿರೊಮ್ಮೆಯಾದಡೆಯು
ಜಲಜಾಕ್ಷ ವಾಸುದೇವನು ಭಜಿಸುವರ ಬೆಂ
ಬಳಿಯೊಳು ಬಿಡದೆ ತಾ ಬಹನು ೪೨

ಈ ವಿಧದಲಿ ಜನನಿಯು ಬುದ್ಧಿವೇಳಲು
ಶ್ರೀ ವಾಸುದೇವನ ದಿವ್ಯನ
ಭಾವಿಸುತಲಿ ಧ್ರುವನರಮನೆ ಬಾಗಿಲಿಂ
ಕೋವಿದನಾಗ ಸಾಗಿದನು ೪೩

ವನಕೆ ತೆರಳುವಣುಗನ ಕಂಡು ಶೋಕದಿಂ
ವನಿತೆ ಸುನೀತಿ ಕೃಷ್ಣನನು
ಮನದಿ ಭಾವಿಸುತಲಿರ್ದಳು ತನುಜಗೆ ಸುಖ
ವನು ಕೊಟ್ಟು ಸಲಹಲೆಂದೆನುತ ೪೪

ಅರಮನೆಯನು ಬಿಟ್ಟು ರಾಜಬೀದಿಯೊಳಗೆ
ತೆರಳುತಲಿಹ ಧ್ರುವನನ್ನು
ಪುರಜನರೆಲ್ಲ ಕಂಡಾಗ ದುಃಖಾಬ್ಧಿಯೊ
ಳುರೆ ಮುಳುಗಿದರೇವೇಳುವೆನು ೪೫

ಆವಾವನಾದರು ಮನದಿ ದ್ವೇಷಿಸಿ ಬೈಯ್ಯೆ
ಶ್ರೀ ವಾಸುದೇವನ ಕೃಪೆಯು
ತಾ ಒಳ್ಳಿತಾಗಿರಲದು ಹರಸಿದುದಪ್ಪು
ದೈ ವಸುಧಾಧಿಪ ಕೇಳು ೪೬

ನಿರುತವೀ ಧ್ರುವನ ಚರಿತೆಯನು ಭಕ್ತಿಯಿಂ
ಬರೆದೋದಿ ಕೇಳಿದ ಜನರ
ವರಚಿಕ್ಕನಾಗಪುರದ ವೆಂಕಟೇಶನು
ಪೊರೆವನಂ ಸುಖವಿತ್ತು ದಯಂದಿ ೪೭

# ಪಡೆದುದ ಒಲ್ಲೆನೆಂದಡೆ ಬಿಡದು

ಕೇಳಿಲೆ ರಾಜ ಧ್ರುವನು ವನಕ್ಕೈದುವ
ಶೀಲ ಕಂಡಾಗ ನಗರದಾ
ಬಾಲೆಯರ್ ಮನೆಮನೆ ಬಾಗಿಲೊಳ್ ನಿಂದು ತಾವ್
ಬಾಲನ ಕಂಡಳಲಿದರು ೧

ತಮ್ಮೊಳು ತಾವೆ ಮಾತಾಡುತಲಣುಗನ
ನುಮ್ಮಳಿಸಿದ ಸುರುಚಿಯನು
ಅಮ್ಮಯ್ಯ ಕೇಳೇ ಎನ್ನುತ ಬೈವರೆಲ್ಲರು
ಸುಮ್ಮನಿರದೆ ಶೋಕದಿಂದ ೨

ಪಾಪಿ ಸುರುಚಿ ಎಳೆಹರೆಯದ ಮಗುವನು
ಕೋಪದಿಂ ಘರ್ಜಿಸುವುದಕೆ
ತಾ ಪಥ್ಯವಾದುದೆಂತಕಟ ಕೋಪೋಚಿತ
ವೇ ಪದ್ಮನಯನೆ ಕೇಳಕ್ಕ ೩

ತಂಗಿ ಕೇಳವಳು ಸವತಿಯಣುಗನು ಎಂಬು
ದಂ ಗಣನೆಗೆ ತಂದಳಾಗಿ
ಅಂಗಜನೊಳು ರಾಯು ನುಡಿಯದಾದನು ಜ್ಞಾನ[1]
ವಂಗಡಿಗೈದಿದ್ದುದೇನೊ ೪

---

1 ಗ್ಲಾನ

ಅಕ್ಕ ಕೇಳರಸನಿರ್ದನೊ ಇರಲಿಲ್ಲವೊ
ಸಿಕ್ಕದೆಯಿರುವನೆಂತರಿಯೆ
ಅಕ್ಕರೆ ಘನರಾಯಗಣಂಗನೊಳೀ ಬಾಲ
ನಕ್ಕಿಯು ನೋಳ್ಪುದೆಂತಕಟ ೫

ತಂಗಿ ಕೇಳರಸಗೆ ಕಿರಿಯರಸಿಯೊಳು ಸ್ನೇ
ಹಂ ಗಡಿಯಿಲ್ಲದೆಯಿಹುದು
ಅಂಗಜನನ್ನು ಸುರುಚಿಯತಿ ಕೋಪದಿ
ಭಂಗಿಸಿದಡೆ ಸುಮ್ಮನಿದ್ದ ೬

ದಿಟ್ಟೆಯಹುದು ಸುರುಚಿಯು ಕೇಳಕ್ಕ ತಾ
ನಟ್ಟಿಬಿಡಲು ಹಸುಳೆಯನು
ಕೆಟ್ಟಮನವು ಬಂದುದೆಂತಿವಳಿಗೆ ಸರಿ
ಗಟ್ಟುವರಿಲ್ಲ ನಾಡೊಳಗೆ ೭

ದ್ವೇಷಿಗಳೊಳಗೆ ಶಿಖಾಮಣಿ ಸುರುಚಿ ತಾ
ನೀಸುತನನ್ನು ಕಾನನಕೆ
ನೀ ಸಾರು ಸಾರೆಂದಳೇಸು ನಿರ್ದಯಳೊ ಕೇಳ್
ತಾ ಸುತವಂತೆಯೊ ಏನೊ ೮

*ಪಿಡಿದು ಪೋಷಿಸುತಲೈದಳೆ........
............ .......... ......
...... ...... ... ............... ....
.. ................... ...............
................... ................ . .
ತೇ ಗಜಗಮನೆ ನೀ ಕೇಳು* ೧೭

---

* * ಈ ಚಿಹ್ನೆಗಳ ನಡುವೆ ಇದ್ದ ಒಂಬತ್ತು ಪದ್ಯಗಳನ್ನು ಒಳಗೊಂಡ ಗರಿ ನಷ್ಟವಾಗಿದೆ.

ಹುಲಿಕರಡಿಯು ಸಿಂಹವಿರುವ ಕಾನನದೊಳ
ಗಳುಕದ ಚಿತ್ತದಿಯಿಹನೆ
ಎಳೆಹರೆಯದ ಸುತನೆಂದು ಸುನೀತಿಯು
ತಿಳಿಯದೆ ಪೋದಳೇಕಕಟ ೧೮

ದೊರೆಯಣುಗನು ತಾನು ಪಾಲುಂಡು ಮನೆಯೊಳ
ಗಿರುವ ಕಾಲದಿ ವನದೊಳಗೆ
ಕರಕಷ್ಟ ತಪಗೈದುಳಿದು ಬಪ್ಪನೆಂತೆನ್ನು
ತರಿಯದೆ ಪೋದಳೇಕಕಟ ೧೯

ಆರಾದಡೇನು ಪೂರ್ವದಲಾರ್ಜಿಸಿದ ಕರ್ಮ
ವಾರಿಪೋಗದು ಫಲಗೊಡದೆ
ನೀರೆ ಕೇಳರಸನ ಸುತನಾದಡೇನು ತಾ
ದಾರಿದೆಗೆದನು ಕಾನನಕೆ ೨೦

ಪಡೆದುದನೊಲ್ಲೆನೆಂದಡೆ ಬಿಡದೆಲ್ಲಿ ತಾ
ನಡಗಿಕೊಂಡಡೆಯು ಕೇಳ್ತಂಗಿ
ಹುಡುಗನು ಮತ್ತೆ ರಾಜ್ಯಾಧಿಪನಣುಗರ
ಅಡವಿಗೈದುವುದ ನೀ ನೋಡು ೨೧

ಅವಿಂತ ಜನ್ಮದಿ ವಾಸುದೇವನ ಶುಭಪಾದ
ಕಮಲವ ನೆನೆಯದೆ ಸುತರ
ವಿಮಲಮುಖವ ನೋಳ್ಪ ಭಾಗ್ಯವು ಸುಮ್ಮನೆ
ಯುಮರದೆಂಬುದ ನೋಡಲಿಲ್ಲ ೨೨

ವಿಧಿಗೆಣೆಯಿಲ್ಲ ಒಂದಿರ್ದೊಡಾನೊಂದಿಲ್ಲ
ಮುದದಾಳ್ವರಣುಗರೆಯಿಲ್ಲ
ಆದರಿಂದ ನೋಡದೆ ತಮ್ಮ ಭಾಗ್ಯಕೆ ಕುಂದ
ನೊದಗಿಸಿಕೊಂಡಳು ಸುರುಚಿ ೨೩

ಈ ವಿಧದಲಿ ಪುರಜನರೆಲ್ಲ ಮರುಗಿದ
ಡಾವದ ತಾರದೆ ಮನಕೆ
ಶ್ರೀ ವಾಸುದೇವನೆ ಗತಿಯೆನ್ನುತಾ ಧ್ರುವ
ಭಾವಿಸುತಡವಿಗೈದಿದನು ೨೪

ನಡೆದನಾ ಕುವರ ಕೋಮಲ ಚರಣಂಗಳ
ನಿಡುತಲವನಿಯೊಳು ಹರಿಯು
ಬಿಡದೆ ಭಾವಿಸುತ ಶ್ರೀ ವಾಸುದೇವನ ಮುದ
ದಡಿಗಳ ತನ್ನಯ ಮನದಿ ೨೫

ವನ ಉಪವನ ಶಾಲಿಗಳನೆಲ್ಲ ನೋಡುತ
ಅನುಪಮ ಸರಸಿಗಳನ್ನು
ಗಣನೆಗೈಯದೆ ಶೋಕವನು ವಾಸುದೇವನ
ನೆನೆಯುತ ವನಕೆ ಸಾರಿದನು ೨೬

ಹಿಂದುಗಡೆಯೊಳಾರಾವಡೆಯು ಮಾತಾಡಿಸ
ಲಂದಗೊಡದೆ ಕಿವಿಗಳನು
ಮುಂದೋರ್ವ ನಿಂದಿರಲರಿಯದೆ ಶ್ರೀಹರಿ
ಯಂ ಧ್ಯಾನಿಸುತ್ತ ಸಾಗಿದನು ೨೭

ಯಾತಕೆನ್ನನು ಸುರುಚಿಯು ಘರ್ಜಿಸಿದಳೊ
ಮತ್ಯಾತಕೆ ರಾಜ ಮುನಿದನೊ
ಯಾತಕೆನ್ನವ್ವೆ ಕಳುಹಿದಳೊ ಶ್ರೀ ಹರಿ
ತಾ ತೋರ್ವನೆಂತೆನ್ನ ಕಣ್ಗೆ ೨೮

ಉತ್ತಮನನ್ನಾಡಿಸುವುದ ಕಂಡದಕೆ ತಾನು
ಅತ್ತು ಬೇಡಿದೆನೇತಕಕಟ
ಒತ್ತಿ ಚಿಕ್ಕಮ್ಮ ಘರ್ಜಿಸಿದಳೇತಕೆ ಹರಿ
ಯಿತ್ತಪನೆಂತಭಯವನು ೨೯

ಚಿಕ್ಕಮ್ಮನೆನ್ನನೀ ಪರಿಯೊಳು ಬೈದರು
ಅಕ್ಕರ ಉಳ್ಳೆನ್ನ ಜನಕ
ತಕ್ಕುದ ಪೇಳದೆ ಸುಮ್ಮನಿರ್ದನದೇಕೊ
ಚಿಕ್ಕವನಾದೆನ್ನ ನೋಡಿ ೩೦

ಬಾಲಲೀಲೆಯೊಳತಿ ಮುದದಾಳ್ವನಂತೆ ತಾ
ಲೀಲೆಯಿಂ ಭೂಷಣಗಳನು
ಬಾಲಕ ಬಾರೆಂದು ಕರೆದೀಯುವವನೀಗ
ತಾಳಿದನ್ಯಾತಕೊ ಮುನಿಸ ೩೧

ತೊಡೆಗೆತ್ತಿ ಕೊಳ್ಳದಿರ್ದಡೆಯು ಎನ್ನೊಡನೆ ತಾ
ನುಡಿಯಂದೆ ಪೋದನೇಕಕಟಾ
ದುಡುಕನೆನ್ನೊಳಗೇನ ಕಂಡನೊ ಶ್ರೀಕೃಷ್ಣ
ಕೊಡುವನೆಂತಭಯುವನೆನಗೆ ೩೨

ಹೋಗುಹೋಗೆಂದು ಚಿಕ್ಕಮ್ಮ ತಾ ಬೈದಡೆ
ರಾಗವನೆನ್ನೊಳು ಜನಕ
ನೀಗಿದನ್ಯಾತಕೊ ವಾಸುದೇವನು ಎನ
ಗಾಗುವನೆಂತು ಪ್ರಸನ್ನ ೩೩

ಎನ್ನ ಜನನಿಯು ಕಂಡಡೆ ಬಹು ಪ್ರೀತಿಯಿಂ
ಮನ್ನಿಪಂಗೆನ್ನೊಡನೀಗ
ಉನ್ನತ ಕೋಪವು ಬಂದುದೇತಕೆ ಹರಿ
ಮನ್ನಿಪನೆಂತೆನ್ನ ತಾನು ೩೪

ತನ್ನಣುಗನನೆ ಆಡಿಸಲೆಂದು ಸುರುಚಿಯು
ಎನ್ನೊಳು ಕೋಪವ ಮಾಡೆ
ಮುನ್ನಿನಂತಿರದೆ ರಾಯನು ಮುನಿದನು ಹರಿ
ಇನ್ನೊಲಿಯುವನೆಂತು ಎನಗೆ ೩೫

ಕಡುಕೋಪದಿಂದ ಚಿಕ್ಕಮ್ಮ ಬೈದಡೆ ರಾಯ
ನುಡಿಸದೆ ಪೋದನಾದಡೆಯು
ನಡೆಯೆಂದಳೆನ್ನ ಜನನಿಯು ಶ್ರೀಕೃಷ್ಣನು
ಕೊಡುವನೆಂತಭಯವನೆನಗೆ ೩೬

ಅಡವಿಗೆ ಪೋಗಿ ನೀ ತಪಗೈದು ವರಗಳ
ಪಡೆ ವಾಸುದೇವನಿಂದೆಂದು
ನುಡಿವಳೆನ್ನವ್ವೆ ತಾ ತಪ್ಪದೆನ್ನನು ಹರಿ
ಹುಡುಗನೆಂದೊಲಿವನೊ ಏನೊ ೩೭

ಬಲ್ಲವರನು ಕಂಡು ಮನ್ನಿಸುವುದಕಿಂತ
ಗಲ್ಲಬಲಿಯದಣುಗರನು
ಉಲ್ಲಾಸದಿಂ ಮನ್ನಿಸುವುದು ಮಾತೆಗೆ ಪ್ರೀತಿ
ಯಲ್ಲವೆ ಒಲಿಯದೆ ಇರನು ೩೮

ಅರಿದ ಬಲ್ಲವರಖಿಳ ಶಾಸ್ತ್ರಗಳನ್ನು
ತೀರುವಂದದಲೋದಿದವರು
ಭೂರಿ ದಿವಸ ತಪಗೈದರಿಯರು ಎಂಬ
ತೋರುವನೆಂತು ತಾನೆನಗೆ ೩೯

ಸಕಲವೇದವು ಶಾಸ್ತ್ರವರಿಯಳೆಂದಳು ಮಾತೆ
ಪ್ರಕಟವಾಗಿಯೆ ಹರಿಯನ್ನು
ಅಕಟಾ ನಾ ಕಾಣ್ಬೆನೆಂತುಪದೇಶಗೈದಳು
ಭಕುತಿಯಿಂದಲಿ ಭಜಿಸೆಂದು ೪೦

ಮಾತೆಯಣುಗನಿಗೆ ಹಿತವಾಗಿ ನುಡಿದುದು
ತಾ ತಪ್ಪದೆಂಬರು ಕೆಲರು
ಪಾತಕಹರ ವಾಸುದೇವನೆ ಗತಿಯೆಂಬೆ
ನಾತನೊಲಿಯದಿರ ಸಿದ್ಧ ೪೧

ಎಲ್ಲಿಗೆ ಪೋಗಲಿನ್ನೆಲ್ಲಿ ಭಾವಿಸಲಿ ಶ್ರೀ
ವಲ್ಲಭ ವಾಸುದೇವನನು
ಉಲ್ಲಾಸದಿಂ ಭಕ್ತರೆಡೆಗೈದುವನು ಎಂದಳ್
ಫುಲ್ಲ ಪದ್ಮಾಕ್ಷನ ಕಾಣೆ ೪೨

ಪೋಗಡವಿಗೆ ತಪಗೈಯೆಂದಳವ್ವೆಯು
ಹೇಗೆ ಪೂಜಿಸಬೇಕೊ ಹರಿಯು
ಬೇಗ ಬರುವನೆಂದಳಿನ್ನು ಕಾಣೆನು ನಾ
ನೇಗೈವನಕಟ ಕಾನನದಿ ೪೩

ಏತಕೆ ಚಿಂತಿಸಲೀಗ ತೋರಿತು ಎನ್ನ
ಮಾತೆಯಾಡಿದ ಮಾತು ಮನಕೆ
ನೀ ತಪ್ಪದಾ ವಾಸುದೇವನ ನೆನೆಯೆಂದಳ್
ಪಾತಕಾಂತಕನ ಭಾವಿಸುವೆ ೪೪

ಮೂರು ಲೋಕಕು ನೀನೆ ಕರ್ತರೆಂಬರು ಎನ
ಗಾರು ಇಲ್ಲೀ ವನದಲ್ಲಿ
ತೋರಭಯುವನಪಹರಿಸು ಎನ್ನಳಲನು
ಮಾರನಯ್ಯನೆ ವಾಸುದೇವ ೪೫

ಈ ಪರಿಯೊಳು ಮನದಲ್ಲಿ ಯೋಚನಗೆಯ್ಯು
ತಾ ಪಸುಳೆಯೀ ನಡೆಯುತ್ತ
ದೀಪಿಸುತೊಂದು ತೇಜಸ್ಸು ತೋರಲು ಕಂಡು
ತಾ ಪಡೆದನು ಮುದವನ್ನು ೪೬

ಇನನಿಗೆ ತೇಜ ಹೆಚ್ಚಿದುದೊ ಕಾಡೊಳು ಕಿಚ್ಚು
ಘನವಾಗಿ ಬೆಳೆದು ತಾ ಬಂತೊ
ಎನಗಿದು ಭ್ರಮೆಯೊ ಶ್ರೀವಾಸುದೇವನು ವರ
ವನು ಕೊಡಲೈದುವ ಬಗೆಯೊ ೪೭

ಏನು ಚೋದ್ಯವೊ ವನದೊಳಗೊಮ್ಮೆ ಸಲಹೆಂದು
ನಾ ನುಡಿದೊಂದು ಗಳಿಗೆಗೆ
ತಾನೊಲಿದನೆ ವಾಸುದೇವನು ಈ ಭಾಗ್ಯ
ಕ್ಕೀ ನೆಲದೊಳು ಸರಿಗಾಣೆ ೪೮

ಬೆಳಕು ತಾನೇನೊ ಕಾಂತಿಯು ಬಹು ಹೆಚ್ಚಿದೆ
ಸುಳಿದು ಎನ್ನಯ ಕಂಗಳಿಗೆ
ಒಲಿದನೊ ವಾಸುದೇವನು ಎನ್ನ ಕ್ಲೇಶವ
ನಳಿಸಿಬಿಡುವೆನೆಂಬ ದಯದಿ ೪೯

ಹೀಗೆಂದು ಧ್ರುವನು ತಾನತಿಯೋಚಿಸುತಲಿರ
ಲಾಗಲಾ ನಾರದಮುನಿಯು
ಬೇಗೆಗಳೆಲ್ಲವ ಪರಿದಣುಗನ ಕಾಯು
ಲಾಗಿ ತಾನೈತಂದ ದಯದಿ ೫೦

ಯೋಚನೆಯೆಂಬುದನೆಲ್ಲವನು ತಾ
ನೀಚಗೈದತಿ ಮೋದದಿಂದ
ಆಚೆಗೆ ನೂಕಿ ಸಂತೋಷವೆಂಬದ್ರಿಯ
ತಾ ಚಾರಿಯಾಗಿ ಹತ್ತಿದನು ೫೧

ಕರಣದೊಳಿರ್ದ ಕಾರ್ಯಂಗಳೆಲ್ಲವು ತಾವೆ
ಕರಗತವಾದ ತೆರದಲಿ
ಹರುಷಸಾಗರ ಮಗ್ನನಾಗಿ ಧ್ರುವನು ತಾನು
ಮರೆದನು ಸಕಲ ಯೋಚನೆಯ ೫೨

ನಿರುತವೀ ಧ್ರುವನ ಚರಿತೆಯನು ಭಕ್ತಿಯಿಂ
ಬರೆದೋದಿ ಕೇಳಿದ ಜನರ
ವರಚಿಕ್ಕನಾಗಪುರದ ವೆಂಕಟೇಶನು
ಪೊರೆವನು ಸುಖವಿತ್ತು ದಯದಿ ೫೩

# ಬರುವುದಿಲ್ಲಯ್ಯನ ಬಳಿಗೆ

ಕೇಳೆಲೆ ರಾಜ ನಾರದಸೂರ್ಯನಂ ಕಂಡು
ಬಾಲಕ ಧ್ರುವನ ಹೃತ್ಪದ್ಮ
ಲೀಲೆಯಿಂದರಳಿ ಸಂತೋಷಸಾಗರದೊಳ
ಗಾಳಿದನಣುಗನೇವೇಳ್ವೆ ೧

ಕರುಣಾಸಾಗರನು ನಾರದಮುನಿ ತಾ ಕಂಡು
ತರುಣನ ಶಿರದಲಿ ತನ್ನ
ಕರವನಿರಿಸಿ ಬಿಗಿದಪ್ಪಿ ಕೊಂಡಾಡಿದ
ನುರು ದಯದಿಂದಲಿ ಧ್ರುವನ ೨

ಏನು ಕಾರಣ ಕಾನನಕೆ ನೀನೈದಿದೆ
ಸೂನುವೆ ನಿನ್ನಯ ಜನಕ
ತಾನು ಸುಮ್ಮನೆಯಿರ್ದನ್ಯಾತಕೆ ಇವನೆಲ್ಲ
ನಾನರಿವಂದದಿ ಪೇಳೈ ೩

ಮುನಿಸನೇತಕೆ ಮಾಡಿ ಬಂದೆ ನಿನ್ನನು ಬೈದ
ಮಾನುಜನದಾರು ಪೇಳಣುಗ
ಘನವಲ್ಲ ರಾಜಪುತ್ರನಿಗಿದು ಎನ್ನೊಳು
ನಿನಗೆಂತು ಬಂದುದು ಪೇಳೈ ೪

ಎಂದಿಂತು ಮುನಿವರ ಕೇಳಲಾ ತರುಣನಾ
ನಂದ ಜಲವು ಸುರಿಯುತಲಿ
ಮುಂದಿಪ್ಪ ನಾರದನಂ ಕಂಡು ಶಿರದಿಂದ
ವಂದಿಸಿದನು ಭಕ್ತಿಯಿಂದ ೫

ದಂಡದಂದದಿ ಶಿರವೆರಗಿದ ತರುಣನ
ಮಂಡೆಯು ಪಿಡಿದು ತಾ ನೆಗಹಿ
ಪುಂಡರೀಕಾಕ್ಷಕೃಪಾಪಾತ್ರನಾಗೆಂದು
ಪಂಡಿತಮುನಿ ಹರಸಿದನು ೬

ತರುಣನ ಬಿಗಿಬಿಗಿದಪ್ಪಿ ನೆತ್ತಿಯನಾಗ
ಕರುಣದಿಂದಲಿ ವಾಸನಿಸಿ
ಹರುಷದಿಂ ತೊಡೆಯೊಳ್ಕುಳ್ಳಿರಿಸಿ ನುಡಿಸಿದನು
ಮರೆ ಮಾಡದುಸುರೆನ್ನೊಳೆಂದು ೭

ಮಾತೆಯೊಡೆಯನುಳಿದಡವಿಗೆ ನೀ ಬಂದೆ
ಯಾತಕೆ ಪೇಳ್ ಬಾಲಮಣಿಯೆ
ಮಾತನಾಡರಸ ತಂದನೊ ನೀನೆಯ್ದಿದ
ರೀತಿಯೊ ರಾಜಕುಮಾರ ೮

ಎಂದಿಂತು ಮುನಿಪತಿ ಕೇಳಲು ತರುಣನು
ತಂದೆಯು ನುಡಿಸದಿದ್ದುದನು
ಇಂದುವದನೆ ಸುರುಚಿಯು ಬೈದಪರಿಯನು
ಅಂದುಸುರಿದ ಮುನಿಯೊಡನೆ ೯

ಕರುಣೆಗಳರಸ ನೀನರಿಯದುದಿಲ್ಲವೀ
ಧರಣಿಯೊಳೆನ್ನ ಪೇಳಿನಲು
ಒರೆವೆನೆಂತಿದ ನಿನ್ನ ಚರಣವೆ ಗತಿಯಲ್ಲ
ದರಿಯೆನನ್ಯವನೆಲೆ ಮುನಿಪ ೧೦

ಚಿಕ್ಕಮ್ಮನಣುಗನಾದುತ್ತಮನಂ ಪಿತ
ನುಕ್ಕುವ ಹರುಷವು ಕೂಡಿ
ಅಕ್ಕರದೋರಿಯಾಡಿಸುತಿರ್ದನದ ಕಂಡು
ಗಕ್ಕನೆ ಬಳಿಗೆ ಸಾರಿದೆನು ೧೧

ಬೇಡಿದೆನೆನ್ನ ತಂದೆಯ ಮಾತನೆನ್ನೊಡ
ನಾಡದೇತಕೆ ಸುಮ್ಮನಿರುವೆ
ನೋಡೆನ್ನನೆಂದಾವ ಪರಿಯ ಕೇಳಿದರು ತಾ
ನಾಡಿಸದಾದನೆನ್ನುವನು ೧೨

ನುಡಿಸದೆ ಪೋದುದ ಕಂಡು ಚಿಕ್ಕಮ್ಮನು
ಕಡುಕೋಪದಿಂದಲೆನ್ನುವನು
ಜಡಿದುಲಿದಳು ನೀನಿಲ್ಲಿರಬೇಡತ್ತ
ನಡೆಯೆಂದು ಕೇಳಲೆ ಮುನಿಪ ೧೩

ಸಾರುಸಾರಿಲ್ಲಿಗೇತಕೆ ಬಂದೆ ನಿನ್ನನ
ದಾರು ಮನ್ನಿಸಿ ಕರೆದವರು
ತೋರುವೆ ದೈನ್ಯವನಾರಿಗಿಂದೆನ್ನುತ
ಚೀರಿ ಬೈದಳು ಕೇಳು ಮುನಿಪ ೧೪

ಜಡಿದು ಚಿಕ್ಕಮ್ಮ ಬೈದರೆ ಎನ್ನ ತಂದೆಯು
ನುಡಿ[ಯ]ದೆ ಪೋಗಲು ನಾನು
ಕಡು ಶೋಕದಿಂ ಮರುಗುತಲೆನ್ನ ಮಾತೆಯಿ
ಪ್ಪೆಡೆಗೆ ಸಾರಿದೆ ಕೇಳು ಮುನಿಪ ೧೫

ಯಾತಕೆ ದುಃಖಪಡುವೆಯೆಂದಡದಕೆ ತಾ
ಮಾತನಾಡದೆ ಸುಮ್ಮನಿರಲು
ಮಾತೆಯು ಕೂಡಡಬಲದೊಳಿರ್ಪಬಲೆಯು
ಮರ್ಾತಾಡಿ ವೇಳ್ದರು ಮುನಿಪ ೧೬

ಸುರುಚಿಯು ಬೈದಳೆಂಬುದ ಕೇಳಿ ಜನನಿಯು
ಮರೆದಳಂಗವ ಶೋಕದಿಂದ
ಮರುಗುತನಿತರೊಳ್ ಚೇತರಿಸಿಕೊಳ್ಳುತಲೆನ
ಗೊರೆದಳು ಬುದ್ಧಿಮಾರ್ಗವನು ೧೭

ವನಕೆ ನೀ ಹೋಗಿ ಶ್ರೀವಾಸುದೇವನ ಪಾದ
ವನಜವ ಹೃದಯದಿ ನೆನೆದು
ಅನುವಾದ ವರವನು ಪಡೆಯೆಂದಳದರಿಂದ
ಲನುಪಮ ಕೇಳ್ಬಂದೆ ನಾನು ೧೮

ಎಂದಿಂತು ತರುಣನು ಶೋಕದಿಂದಡವಿಗೆ
ಬಂದ ಕಾರಣವ ಪೇಳಲ್ಕೆ
ನೊಂದು ಚಿತ್ತದಿ ಮುನಿ ಸುರುಚಿ ಬೈದುದಕಾಗ
ತಂದನಚ್ಚರಿಯನು ಮನಕೆ ೧೯

ಎನಿತು ನಿರ್ದಯಳಕಟಕಟ ತನ್ನುದರದಿ
ಜನಿಸಿಹುದಿಲ್ಲವೆ ಸುತನು
ಮನವೆಂತು ಬಂದುದೊ ಹಸುಮಗನನ್ನು ನೀ
ವನಕಾಗಿ ನಡೆಯೆನ್ನುವದಕೆ ೨೦

ಕಾಳಬುದ್ಧಿಯು ಹೆಂಗಸಹುದು ಸುರುಚಿಯು ತಾ
ಬಾಳುವೆನೆಂಬಂತೆ ಪರರು
ಬಾಳಬೇಕೆಂಬರೆಂದರಿಯದೆ ಪೋದಳೇ
ಪೇಳುವೆನಕಟ ಗೋವಿಂದ ೨೧

ನಾರಿಯರೆದೆಗೆಣೆಯಿಲ್ಲವೀ ಜಗದೊಳು
ನಾರಾಯಣಾನಂತ ಕೃಷ್ಣ
ಸಾರಡವಿಗೆಯೆಂದೀ ಮಗುವನು ಬೈವರೆ
ತೋರಿತೆಂತಕಟ ದುಶ್ಚಿಂತೆ ೨೨

ಕಿಡಿಲೆರಗಿದರೆ ಕಲ್ಲೊಡೆವುದು ಕಬ್ಬಿನ
ಕಡಿಯುಪ್ಪುದುಳಿಯಿಂದೊಕ್ಕಿದಡೆ
ಬಿಡದೊಮ್ಮೆಯಾದರು ಸಂದು ನಾರಿಯರೆದೆ
ಕಡುಪಾಪಿ ಸುರುಚಿ ತಾನಹುದು ೨೩

ಶಶಿಬಿಂಬವನು ಹಿಂಗಳೆವಂತೆ ಮುಖಪದ್ಮ
ಒಸರುವ ಸುಧೆಯಂತೆ ಮಾತು
ವಶಗೈವರಿವರಿಂದಲಲ್ಲದೆ ಸರ್ವರ
ನಸಿಯಂತೆ ಚಿತ್ತ ಬಾಲೆಯರ ೨೪

ಅಡವಿಯೊಳೆಲ್ಲಿಯು ಪರಿವ ಹಳ್ಳಂಗಳ
ಕಡುಡೊಂಕ ತಿದ್ದಲುಬಹುದು
ಮಡದಿಯಾ[ದವಳ ಚಿ]ತ್ತದ ಡೊಂಕ ತಿದ್ದಲ್ಕೆ
ಮೃಡಗಳವಲ್ಲವು ಸಿದ್ಧ ೨೫

ಇಂತೆಂದು ಮುನಿಪತಿ ಮಾನಸದಲಿ ಬಹು
ಚಿಂತಿಸಿಯಣುಗನಿಗಾಗ
ಸಂತಸದಿಂ ಬುದ್ಧಿವೇಳಿದ ತಪಗೈವೆ
ಯೆಂತೆಲೆ ಬಾಲ ನೀನೆಂದು ೨೬

ವನದೊಳಗೊರ್ವನಿರುವೆಯೆಂತು ಸಿಂಗಗ
ಳ್ಮನಿದು ಬಂದರೆ ತಾಳ್ವೆಯೆಂತು
ವನಜಾಕ್ಷ ವಾಸುದೇವನನೊಲಿಸುವೆಯೆಂತು
ಮುನಿಮನೋದೂರನಾಗಿಹನ ೨೭

ಬಾಲಕರೊಡಗೂಡಿಕೊಂಡು ನೀ ಸತತವು
ಲೀಲೆಯಿಂದಾಡುವ ಕಾಲ
ತಾಳುವದಿದು ಧರವಲ್ಲವೀ ಕೋಪವ
ಕೇಳೆನ್ನ ನುಡಿಯನು ಮಗನೆ ೨೮

ಕಷ್ಟವಡವಿಯೊಳು ತಪಗೈದು ಭಜಿಪುದು
ಕೃಷ್ಣನನೇಕಚಿತ್ತದಲಿ
ಎಷ್ಟು ದಿವಸಕಾದಡೆಯು ಯೋಗಿಗಳ್ಕಾಣ
ರಷ್ಟಭೂತಿಗಳೊಡೆಯನನು ೨೯

ತರುಣನು ನೀನು ತಪವ ಮಾಳ್ಪುದೆಂತಯ್ಯ
ಹರಿಯೊಲಿಯುವನೆಂತೈ ನಿನಗೆ
ಅರಸಿ ಕಾಣವದಾವ ದೇವನ ವೇದಗಳ್
ವರ ಪಡೆಯುವೆಯೆಂತು ನೀನು ೩೦

ನಿನ್ನನು ರಾಯನತ್ಯಂತ ಪ್ರೀತಿಯು ಕೂಡಿ
ಮನ್ನಿಸುವಂತೆ ನಾ ಮಾಳ್ಪೆ
ಚಿಣ್ಣನೆ ವನವೆಲ್ಲಿ ನೀನೆಲ್ಲಿ ನಡೆ ಪುರ
ಕೆನ್ನನುಡಿಯ ಕೇಳು ಮಗನೆ ೩೧

ಹುಡುಗನಂತಾಡುತಿರದೆ ವನಕೈದುವ
ದುಡುಕು ಬುದ್ಧಿಯ ಮಾಳ್ಪರೇನೈ
ದೃಢದಿಂದ ವಾಸುದೇವನ ನೆನೆಯುವೆಯೆಂತು
ಪಡೆಯುವೆ ವರಗಳನೆಂತು ೩೨

ತಪಗೈವರಿದು ಕಾಲವಲ್ಲ ಬಾಲತ್ವವು
ಕಪಟ ಬುದ್ಧಿಯ ಬಿಡಬೇಕು
ಉಪರಿಸಾಧನವಲ್ಲದಿದನು ಯೋಚಿಪರೆ ಬಂ
ದಪರೆ ಕಾನನಕೆಲೆ ಮಗನೆ ೩೩

ಮಿತಿಯಿಲ್ಲದಿಹ ದಿವಸವು ತಪಗೈವಂತೆ
ಯತಿಗಳಾಗಿಹ ಯೋಗಿವರರು
ಪತಿತಪಾವನನಂಘ್ರಿಗಾಣರು ಬಾಲ ನೀ
ನಂತಿಗೈದು ವರಿಸುವೆಯೆಂತೈ ೩೪

ಸುಲಭವಲ್ಲೈ ತಪಗೈವದು ಕೇಳು ನೀ
ನೆಲೆ ಬಾಲ ಪುರಕಾಗಿ ನಡೆಯೈ
*[ಬೆಲೆಯಿಲ್ಲ]ದತಿಪ್ರೀತಿ ನಿನ್ನೊಳರಸಗಾಹ
f .. .. ... ....... . ... . . . ೩೫

ಮುನಿಪನೀ ಪರಿಯು ಬೋಧಿಸಲಾಗಿ ಕೇಳಿಯಾ
ತನುಜ ಧ್ರುವನು ಭಕ್ತಿಯಿಂದ
ತನುವನು ದಂಡದಂದದಿ ಪೊಡಮಟ್ಟೊಡೀ
ಯುನು ಮುಟ್ಟಿಸಿದ ತನ್ನ ಶಿರವ (?) ೩೬

ಚರಣಗಳ್ಗೆರಗಿದ ಸುತನ ತಕ್ಕೈಸಿಯು
ಕರುಣದಿಂ ತೊಡೆಯೊಳ್ಕುಳ್ಳಿರಿಸಿ
ತರುಣ ನಿನ್ನಂತರಂಗದ ಪರಿಯುನ್ನು ಪೇಳ್
ಮರೆಮಾಡದೆಂದನಾ ಮುನಿಪ ೩೭

ಪುರಕೆ ನೀ ನಡೆಯೆಂದೆನಗೆ ಪೇಳಬೇಡೆಲೆ
ಕರುಣಿಗಳರಸ ಮುನಿಪ[ನೆ][1]
ಹರಿಯೆನಗೊಲಿವನೆಂತದನು ಬೋಧಿಸು ಬೇಗ
ಬರುವುದಿಲ್ಲಯ್ಯಾನ ಬಳಿಗೆ ೩೮

ಸುರುಚಿಯಾಡಿದ ಕ್ರೂರ ಮಾತೆಂಬ ಬಲುಮೊನೆ
ಶರವೆನ್ನ ಎದೆಯುನು ಬಿಡದೆ
ಕೊರೆಯುತಲಿದೆ ಪರಿಹರಿಸು ಶ್ರೀಹರಿಯುನು
ಅರಿವ ಬುದ್ಧಿಯುನೆ ಬೋಧಿಸುತ ೩೯

ಸುರುಚಿಯಾಡಿದ ವಚನಾಗ್ನಿಯೆನ್ನಂಗವ
ನುರುಹುತಲಿದೆಯುದನೀಗ
ನೆರೆತು[ಪಿ][2]ಸುವರೆ ಶ್ರೀವಾಸುದೇವನ ಕೃಪಾ
ವರುಷವು ಸುರಿಯುಬೇಕಯ್ಯ ೪೦

---

* ಅರ್ಧತ್ರುಟಿತ

f ಈ ಸಾಲು ನಷ್ಟವಾಗಿದೆ

1 ಗೆ 2 ಬಿ

ಸುರುಚಿಯಾಡಿದ ವಾಕ್ಯವೆಂಬ ಸರ್ಪನು ಎನ್ನ
ಹರಿದಾಡಿ ಕಚ್ಚುತಲಿದೆಕೊ
ಕೊರಗಿಸುವಿದ [ಕೆಡಿಸೆ][1] ವಾಸುದೇವನ
ಕರುಣಾಗರುಡನಲ್ಲದಿಲ್ಲ ೪೧

ಅನಲನುಬ್ಬೆದ್ದುರಿಯುತ ಬರೆ ಜಲದಿಂದ
ಮನುಜರು ತಂ[ಪಿ][2] ಪರಯ್ಯ
ಘನಕ್ರೋಧದಿಂದಾಡೆ ಕಠಿಣೋಕ್ತಿಯೆಂಬಗ್ನಿ
ಯನು ಕೆಡಿಪುದು ಸಾಧ್ಯವಲ್ಲ ೪೨

ಶರವೆದೆಮಾತ್ರವ ಕೊರೆದು ಕೊಂಡೊಯ್ಯುವುದು
ದುರುಳೋಕ್ತಿಶರವೆದೆಯಲ್ಲಿ
ಇರುತ ಸರ್ವಾಂಗವ ಜರಿಸುತ ಕೋಪವ
ಕರೆದುಕೊಂಬುದು ಸಹಾಯಕ್ಕೆ ೪೩

ನಡೆನಗರಕ್ಕೆಂದು ಎನಗೀಗ ಪೇಳದೆ
ಕಡುಕೃಪೆಯಿಂದ ನೀವೀಗ
ದೃಢದಿ ಶ್ರೀವಾಸುದೇವನ ಭಜಿಸುವದೊಂದ
ನುಡಿದು ಕಾಪಾಡೆಲೆ ಮುನಿಪ ೪೪

ಮೊದಲೆ ಕ್ಷಾತ್ರವನನುಕರಿಸಿ ರಾಜ್ಯವ ಪಾಲಿ
ಪುದ[ಕೆ ವಿರ]ಕ್ತವೀ ಚಿತ್ತ
ಅದರ ಮೇಲಬಲೆ ಧಿಕ್ಕರಿಸಿ ಬೈದೆನ್ನ ತಾ
ಳ್ವದು [ಕರ] ಕಷ್ಟ ಕೇಳ್ಮುನಿಪ ೪೫

ಒರೆಯ ಬೇಡಯ್ಯನೆಡೆಗೆ ನಡೆಯೆಂದೆನ್ನ
ಗುರು ದಯದಿಂದ ಮಂತ್ರೀಗ
ಹರಿಯೊಲಿಯುವ ಮಾರ್ಗವ ನಿರೂಪಿಸು ಬೇಗ
ಬರುವುದಿಲ್ಲಯ್ಯನ ಪುರಕೆ ೪೬

---

1 ಕೆಡಸಿ, 2 ಬಿ

ಪರಮಪುರುಷರಡಿ ದರುಶನವಾದುದೆ
ಹರಿಯೊಲಿಯುಪರೆ ಸಾಧನವು
ನೆರೆಕಂಡೆ ನಿಮ್ಮನೆನಗೆ ವಾಸುದೇವನು
ವರವೀವ ಸಂದೇಹವಿಲ್ಲ ೪೭

ಹರಿಯೆನಗೊಲಿವುದಸಾಧ್ಯವಾದರೆ ನಿಮ್ಮ
ದರುಶನವೀಗ ಸಿಕ್ಕುವದೆ
ಪುರವ ಬಿಟ್ಟಡವಿಯೊಳ್ಳೈದುವೆನಿದಿರಿಗೆ
ಕರುಣದಿಂದೀಗ ನೀ ತೋರ್ದೆ ೪೮

ಎಂದಿಂತು ತರುಣನು ಮರಳಿ ಕೇಳಲು ಮುನಿ
ಎಂದನಾ ಬಾಲಕನೊಡನೆ
ಇಂದಿರೆಯರಸ ಶ್ರೀ ವಾಸುದೇವನು ಒಲಿ
ವಂ ದಯಂದಿಂ ಕೇಳಂ ಮಗನೆ ೪೯

ತರುಣನ ಚಿತ್ತದೃಢವ ಕಂಡಾಮುನಿ
ವರನು ಸಂತೋಷಸಾಗರದಿ
ನೆರೆಯದ್ದನಾಗ ಪೇಳಿದ ವಾಸುದೇವನ
ಕರುಣವ ಪಡೆವ ಮಾರ್ಗವನು ೫೦

ನಿರಂತವೀ ಧ್ರುವನ ಚರಿತೆಯನು ಭಕ್ತಿಯಿಂ
ಬರೆದೋದಿ ಕೇಳಿದ ಜನರ
ವರಚಿಕ್ಕನಾಗಪುರದ ವೆಂಕಟೇಶನು
ಪೊರೆವನು ಸುಖವಿತ್ತು ದಯದಿ ೫೧

# ವಿಶ್ವಾಸವಿದ್ದವಗೆಲ್ಲವು ಸಾಧ್ಯವು

ಕೇಳೆಲೆ ರಾಜ ನಾರದಮುನಿ ಧ್ರುವನಿಗೆ
ಪೇಳಿದನತಿ ಕೃಪೆಯಿಂದ
ಶ್ರೀಲೋಲ ವಾಸುದೇವನ ಚರಣಾಬ್ಜವ
ನೋಲಗಿಸುವ ಪರಿಯನ್ನು ೧

ತರುಣ ಕೇಳ್ನಿ(ನ)ಗೆ ಶ್ರೀವಾಸುದೇವನು ತಾನು
ವರವೀವ ಸಂಶಯವಿಲ್ಲ
ಕರುಣಾಸಾಗರ ತನ್ನ ಚರಣಸೇವಕಪ್ರಿಯ
ಪರಮಪುರುಷನು ಕೇಳ್ಮಗನೆ ೨

ಜನನಿ ಪೇಳಿದ ಮಾರ್ಗವದು ಸುಖಕರವಲೆ
[ಅಣುಗ] ನೀ ಕೇಳದರಿಂದ
ವನಜಾಕ್ಷವಾಸುದೇವನು ಕೃಪೆದೋರ್ವ ನೀ
ನನುಮಾನಗೈಯಬೇಡಿದಕೆ ೩

ವಿಶ್ವಾಸವಿದ್ದವಗೆಲ್ಲವು ಸಾಧ್ಯವು
ವಿಶ್ವಾಸವಿರೆ ಭಕ್ತಿ ತೋರ್ಕು
ವಿಶ್ವಾಸವಿಲ್ಲದಗಿಹಪರವಿಲ್ಲ ನೀ
ವಿಶ್ವಾಸಗೈ ಹರಿಯೊಳಗೆ ೪

ತನ್ನ ತಾ ತಿಳಿದುಕೊಂಬುದು ಸುಖಮಾರ್ಗ ಮ
ತ್ತನ್ಯರ ನುಡಿ ಕಾರ್ಯಹಾನಿ
ಇನ್ನು ಜನನಿ ಗುರು ಪಿತೃವಾಕ್ಯವದು ನೋಡ
ಲುನ್ನತ ದೈಶ್ವರ್ಯಕರವು ೫

ಪಡುಸೂರ್ಯ ಮೂಡಿದಡೆಯು ಹೇಮಾಚಲ
ನಡುಗಿದಡೆಯು ಭೂಮಿ ಹೊರದೆ
ಬಿಡಲಲಸಂತ ಕೇಳು ಮಾತೆಯು ಹರಸಿದ
ನುಡಿಗಪಜಯವಿಲ್ಲ ಮಗನೆ ೬

ಕನಕದ ಬೆಟ್ಟ ಕೈವಶದಲಿದ್ದಡೆಯು ತಾ
ನನುಭವ ಗೈಯಲರಿಯದೆ
ಮನೆಮನೆ ಗೋಪಾಳಕೈದುವಂಧವನಿಗೆ
ಜನನಿಯು ಬಿಟ್ಟನ್ಯಗುರೇವು ೭

ರಸವದಗೈವದರಿತು ಪರಮನೆಗಳ
ಕಸವ ಗುಡಿಸಿ ಕೂಲಿ ತಂದು
ಹಸಿವ ಕಳೆವ ಮನುಜಗೆ ಮಾತೆಯಲ್ಲದೆ
ಹೊಸಗುರು ಬೇಕಯ್ಯ ಮಗನೆ ೮

ಜನನಿಯು ಕಡುಗರುಣದಲಿ ಹರಸಿ ನಿನ್ನ
ವನಕೆ ಕಳುಹಿದ ಮೇಲಿನ್ನು
ಚಿನುಮಯ ವಾಸುದೇವನು ಬೇಗ ವರಗಳ
ನನುಮೋದದಿಂದೀವ ಮಗನೆ ೯

ಇದಕೆ ನೀ ಸಂದೇಹಗೈಯದೆ ಚಿತ್ತದಿ
ಮುದದಿಂದ ಜನನಿಯಾಡಿದುದ
ಎದೆಯೊಳು ದೃಢವಾಗಿಯಿರಿಸಿಕೊಂಡಚ್ಯುತ
ಪದವ ಭಾವಿಸು ಒಲಿಯುವನು ೧೦

ವಾಸುದೇವನು ಭಕ್ತಪೋಷಣೆಯಲಿ ಬಹ
ಳಾಸಕ್ತಿಯವನದರಿಂದ
ನೀ ಸಾರು ಮಧುವನಕಾ ಸಚ್ಚಿದಾನಂದ
ದಾಸನಾಗೀಯುವ ವರವ ೧೧

ಗುರುಹಿರಿಯರ ಕಂಡು ಎರಗುತ್ತ ಶ್ರೀಹರಿ
ಚರಿತೆಯ ಮುದದಿ ಲಾಲಿಸುತ
ವರಪಿತೃ ಮಾತೃಗಳೊಳು ಭಕ್ತಿಯುಕ್ತನಾ
ಗಿರು ವಾಸುದೇವನೊಲಿವನು ೧೨

ಹರಿಯ ಭಕ್ತರ ದರುಶನ ಮಾಡುವರನು
ಹರಿಭಕ್ತ ಸೇವಕರನ್ನು
ನಿರುತವು ಸ್ಮರಿಸುತ ನೀನೆ ದಿಕ್ಕೆಂದು ಶ್ರೀ
ಹರಿಯನೆ ನೆನೆಯಯ್ಯ ಮಗನೆ ೧೩

ಪುಣ್ಯಕ್ಕೆ ನೆಲೆಯಾಗಿ ಶೋಭಿಪ ಮಧುವನ
ವನ್ನು ನೀ ಸಾರಿ ಸಂತಸದಿ
ಚೆನ್ನಾಗಿ ಯಮುನೆಯೊಳ್ಮಿಂದು ಮಡಿಯನುಟ್ಟು
ಬಣ್ಣಿಸು ಹರಿಗುಣಗಣವ ೧೪

ಲೇಸಾಗಿ ಯಮ ನಿಯಮಾದಿ ನಿಷ್ಠೆಯೊಳು ನೀ
ನಾಸನವನ್ನಳವಡಿಸಿ
ಶ್ವಾಸವ ಬಿಗಿದು ತಂದಿಂದ್ರಿಯಂಗಳ[1] ಸೆಳೆ
ದಾಸಚ್ಚಿನ್ಮೂರ್ತಿಯ ನೆನೆಯೈ ೧೫

ನವವಿಧ ರತ್ನಂಗಳಿಂದ ತೆತ್ತಿಸಿ ಮತ್ತೆ
ರವಿಯ ತೇಜವನು ಹಿಂಗಳೆವ
ಶಿವತರವಾದ ಕಿರೀಟದ ಸೊಬಗ ನೀ
ನವಿರಳ ಚಿತ್ತದಿ ನೆನೆಯೈ ೧೬

1 ಶಳ

ಕುರುಳುಗಳೊಪ್ಪಂಕಿ ಸಾಲಾಗಿ ಶೋಭಿಸುತ ಮು
ತ್ತುರುತರ ಕಸ್ತೂರಿ ತಿಲಕ
ಇರುವಂಥ ಶುಭಕರ ನೊಸಲ ಸುಂದರ[ನ][1]ನ್ನು
ಕರುಣದಿ ಬಿಡದೆ ಧ್ಯಾನಿಪುದು. ೧೭

ಮಾರಚಾಪವ ನಿಂದಿಸುವ [ಭ್ರೂ][2]ಯುಗಳವ
ಸಾರಸದಳವ ಹಿಂಗಳೆವ
ಸೇರಿದರೊಳು ದಯಾರಸವನು ಮುದದಿಂದ
ತೋರುವಕ್ಷಿಗಳ ಧ್ಯಾನಿಪುದು ೧೮

ಕನ್ನಡಿಯನು ತಿರಸ್ಕರಿಪ ಕದಪುಗಳ
ಚೆನ್ನಾಗಿ ಪೊಳೆವ ಕುಂಡಲದ
ಉನ್ನತಕಾಂತಿಗೂಡಿಪ ಕ[ರ್ಣ]ಯುಗಳಂಗ
ಳು ನಿಜವಾಗಿ ಧ್ಯಾನಿಪುದು. ೧೯

ಅರೆಯರಳಿದ ಚಂಪಕಾ ಕುಸುಮವನು ತಾ
ಜರೆಯುತಲಿರುವ ನಾಸಿಕವ
ಸರಿಯಿಲ್ಲದತಿ ಬಣ್ಣವಾದ ದಚ್ಛದಗಳ (?)
ನಿರದೆ ಚಿತ್ತದೊಳು ಧ್ಯಾನಿಪುದು ೨೦

ಇಂದು ನೀನೇ ದಿಕ್ಕಲ್ಲದೆ ಬೇರೆ ಗತಿಯಿಲ್ಲ
ವೆಂದು ಕೂಗುವರನ್ನು ನೋಡಿ
ಮಂದಹಾಸದಿ ನಗಲಾಗ ತೋರುವ ದಂತ
ದು[3][ದ]ವ ಬಿಡದೆ ಧ್ಯಾನಿಪುದು ೨೧

ದುರುಳರ ಕೊಂದವನೆಂದುದಯಿಸೆ ತನ್ನು
ದರದಲ್ಲಿ ಗೋಪಿ ತಾ ಮುದದಿ
ಇರದೆ ಚುಂಬಿಸಿ ಮುದ್ದಾಗೈದಂಥ ಮುಖಪದ್ಮ
ದಿರವನು ಬಿಡದೆ ಧ್ಯಾನಿಪುದು ೨೨

---

1 ವ 2 ಭ್ರೂವ 3 ಗ

ಮೂರು ರೇಖೆಗಳಿಂದ ತೋರುತ ಶಂಖದಾ
ಕಾರವ ಜರಿಯುತ ಮತ್ತೆ
ತೋರಮುತ್ತಿನ ಸರಗಳ ಹೊತ್ತು ಕಾಂತಿಯು
ಬೀರುವ ಗಳವ ಧ್ಯಾನಿಪುದು ೨೩

ಶರಣಾಗತಪ್ರಿಯನೆಂಬ ಬಿರುದ ತೋರ್ಪ
ತೆರದಲಾ ಮುನಿಯುಂಘ್ರಿಯನು
ಧರಿಸಿ ಶ್ರೀದೇವಿಗಾಲಯವಾಗಿ ಹೃದಯವ
ದಿರುವ ಭಾವವನು ಧ್ಯಾನಿಪುದು ೨೪

ಸಿಂಧುವಿನಿಂ ಬಂದ ಸುಧೆಯೊಳು ಪುಟ್ಟಿಯಾ
ನಂದವನಚ್ಯುತಗಿತ್ತು
ಅಂದದಿಂದುರೆ ಕೊರಳಿಂ ಜೋಲ್ವ ತುಲಸಿಯ
ಚಂದದ ಸರವ ಧ್ಯಾನಿಪುದು ೨೫

ನಾಗೇಶ ತನ್ನೊಂದು ಜಿಹ್ವೆಗೆ ಸಾಸಿರ
ವಾಗುವಂದದಿ ಬಣ್ಣಿಸಿದರೂ
ಆಗದನಿತು ಭೂಷಣಗಳಿಟ್ಟು ಮೆರೆವನ
ರಾಗದಿಂ ಬಿಡದೆ ಧ್ಯಾನಿಪುದು ೨೬

ಅರುಗು ಸಾಸಿರದಿಂದ ಉರೆ ಸೂರ್ಯಕೋಟಿಗ
ಳ್ಕರವನು ಜರೆವ ಕಾಂತಿಯನು
ಧರಿಸಿ ದಾನವರ ಸಂಹರಿಸಿದ ಚಕ್ರವೊ
ಪ್ಪಿರುವಂಥ ಕರವ ಧ್ಯಾನಿಪುದು ೨೭

ಶಶಿಕೋಟಿಗಳ ಕಾಂ[ತಿ ಯಾ]ತಕೆನ್ನುವ ವೊಲ್ ತಾ
ನೆಸೆವಂಥ ತೇಜವ ಸುತ್ತ
ಪ್ರ[ಸರಿಪ] ಶಂಖವ ತಾಳಿ ಮಂಗಳದಿ ಶೋ
ಭಿಸುವಂಥ ಕರವ ಧ್ಯಾನಿಪು[ದು] ೨೮

ಶರಣು ಹೊಕ್ಕನು ನೀನೆ ಗತಿಯೆನ್ನುವೆಲ್ಲರ
ಕರದು ಹೆದರಬೇ[ಡೆಂದು]
ಕರುಣದಿಂದಭಯವ ನೀಡುವ ಹಸ್ತಪಂ
ಕರುಹವ ಬಿ[ಡದೆ ಧ್ಯಾನಿ]ಪುದು ೨೯

ಕನಕಾದ್ರಿಗೊಡೆಯನೆಂಬಂದದಿ ಪೊಳೆಯುತ್ತ
.. ...... ಕೊಂದಂಥ
ಘನವಾದ ಕೌಮೋದಕಿಯನೊತ್ತಿ ಹೊಳೆವ...
.. . . . . .. ದ ಕರವ ಧ್ಯಾನಿಪುದು ೩೦

ಶರಧಿಯೊಳುದಿಸಿ ಸೂರ್ಯಾಗ್ನಿ ಸೂ . ಳ
ಕರಗಳ ಜರಿವ ಕೌಸ್ತುಭವು
ಇರುವ ಭಾವವ ಸಂತಸಾಬ್ಧಿಯೊ(ಳ್ಮುಳು) ಗುತ
ಲಿರದೆ ಚಿತ್ತದಲಿ ಧ್ಯಾನಿಪುದು ೩೧

ಕಿರಿಘಂಟೆ ಸರಗೂಡಿ (ಪೊಳೆವ)ರತ್ನಗಳಿಂದ
ಬೆರೆದ ಕಾಂಚಿಯು ದಾಮದಿರವ
ಸರಸಿಜನಾಭನ ಕಟಿಗಮರಿದ ಪೀತಾಂ
ಬರವನು ಬಿಡದೆ ಧ್ಯಾನಿಪುದು ೩೨

ಶರಣುಹೊಕ್ಕನು ಎಂದು ಕೂಗುವರೆಡೆಗೆ ತಾ
ಬರುವರೆ ಸಂತೋಷದಿಂದ
ಗರುಡನನೇರ್ದಾಗಲಾತನ ಹೆಗಲೊಳ
ಗಿರುವ ಜಾನುಗಳ ಧ್ಯಾನಿಪುದು ೩೩

ಚಿತ್ತದಿ ಸಂತಸವಡುತಲದಕೆ ಕೊನೆ
ಯೆತ್ತಲು ತೋರದ ಮುದದಿ
ಮತ್ತೇಭಗಾಮಿ ನಿಂದಿರೆ ತನ್ನ ಕರಗಳಿಂ
ದೊತ್ತುವಂಘ್ರಿಗಳ ಧ್ಯಾನಿಪುದು ೩೪

ಸರಸಿಜಭವ ತಾನು ಭಕ್ತಿಯಿಂ ಹೃದಯ ಪಂ
ಕರುಹದಿ ಧ್ಯಾನಿಸಿ ಬಿಡದೆ
ಪರಮಪದವಿಯ ಸಾಧಿಸಿದಂಘ್ರಿಯುಗ್ಮವ
ಕರಣದೊಳ್ಬಿಡದೆ ಧ್ಯಾನಿಪುದು ೩೫

ಕರಕಷ್ಟ ಬಂದಂಥ ಸಮಯದೊಳೊಮ್ಮೆಯಾ
ದರು ನೆನೆದವರಿಗೆ ಸುಖವ
ಕರುಣಿಸಿ ದಯದಿ ರಕ್ಷಿಪ ಚರಣಾಬ್ಜವ
ಕರುಣದೊಳ್ಬಿಡದೆ ಧ್ಯಾನಿಪುದು ೩೬

ಪರಮಭಕ್ತಿಯೊಳು ಶ್ರೀವಾಸುದೇವನ ಮೂರ್ತಿ
ಯಿರವನು ಧ್ಯಾನಿಸಿ ಬಿಡದೆ
ಪರಿಪರಿಯಿಂ ಸ್ತುತಿಗೈಯಲಿಷ್ಟವನಿತ್ತು
ಪೊರೆವನು ದಯದಿ ಕೇಳ್ ಧ್ರುವನೆ ೩೭

ನಾರಾಯಣಾನಂತ ವಾರಿಜ ದಳನೇತ್ರ
ಪಾರರಹಿತ ಸುಚರಿ[ತ್ರ]
ವಾರಣಭಯವ ನಿವಾರಣಗೈದನೆ
ಶ್ರೀ ರಮಣಾನಂತ ಸಲಹೈ ೩೮

[ಪರ]ಮ ಪಾವನ ಸುರವರವಂದ್ಯಶುಭಪಾದ
ಸರಸಿಜ ಶ್ರೀವಾಸುದೇವ
........ ಶುಭಕರ .... ಗೋವಿಂದ
ಪರಮೇಶ ದೇವಮಾಂ ತ್ರಾಹಿಃ ೩೯

ವಿಶ್ವಾಧಾರಾನಂತ ವಿಶ್ವೇಶ್ವರಾಚ್ಯುತ
ವಿಶ್ವಪಾಲಕ [ವಿಶ್ವವಂ]ದ್ಯ
ವಿಶ್ವವ್ಯಾಪಕ ಜಗನ್ಮಂಗಳ ರೂಪಕ
ವಿಶ್ವಸ್ವರೂಪ ಮಾಂ ತ್ರಾ[ಹಿ] ೪೦

ಮಾಂ ತ್ರಾಹಿ ಗೋವಿಂದ ಮಾಂ ತ್ರಾಹಿ ಗೋಪಾಲ
ಮಾಂ ತ್ರಾಹಿ ತ್ರಾಹಿ [ಶ್ರೀ] ರಾಮ
ಮಾಂ ತ್ರಾಹಿ ಶ್ರೀ ಕೃಷ್ಣ ಮಾಂ ತ್ರಾಹಿ ಮಧುಹರ
ಮಾಂ ತ್ರಾಹಿ ಶ್ರೀ ವಾಸುದೇವ ೪೧

ಮಾಂ ತ್ರಾಹಿ ಕಮಲಾಕ್ಷ ಮಾಂ ತ್ರಾಹಿ ಕಮಲೇಶ
ಮಾಂ ತ್ರಾಹಿ ಕಮಲದ ತೇಜ
ಮಾಂ ತ್ರಾಹಿ ಶಶಿಸಖ ಮಾಂ ತ್ರಾಹಿ ಜಗದೀಶ
ಮಾಂ ತ್ರಾಹಿ ಶ್ರೀ ವಾಸುದೇವ ೪೨

ಈ ವಿಧದಲಿ ನೀನೆ ಗತಿಯೆಂದು ಭಜಿಸಲು
ಏ ವಸುಧೇಶನ ಸುತನೆ
ನೀ ಒಲಿದಲ್ಲಿ ಸನ್ಮುಕ್ತಿಯು ನಿನ್ನನು
ಶ್ರೀ ವಾಸುದೇವ ರಕ್ಷಿಸನು ೪೩

ಹೋಗು ನೀ ಕಾಳಿಂದೀ ತೀರದ ಮಧುವನ
ಕಾಗಿ ಶ್ರೀ ವಾಸುದೇವನನು
ರಾಗದಿಂ ಭಜಿಸತಿ ಕರುಣದಿಂದಿಷ್ಟವ
ಬೇಗ ಪಾಲಿಪನೆಲೆ ಮಗನೆ ೪೪

ಎಂದಿಂತು ಮುನಿವರನುಪದೇಶ ಗೈಯಲಾ
ನಂದ ಸಾಗರದೊಳು ಮುಳುಗಿ
ಅಂದದಿಂ ನಾರದಗೆರಗಿ ಬೀಳ್ಕೊಂಡು ಮು
ಕುಂದನ ನೆನೆಯುತ್ತೈದಿದನು ೪೫

ತರುಣನಿಗುಪದೇಶವಿತ್ತು ನಾರದಮುನಿ
ವರನು ಮಾಹಿಷ್ಮತಿ ಪುರಕೆ
ಅರಸನಾದುತ್ತಾನಪದರಾಯನೆಡೆಗೆ ತಾ
ಬರುತಿರ್ದ ಸಿರಿಯನೇವೇಳ್ವೆ ೪೬

ನಿರಂತವೀ ಧ್ರುವನ ಚರಿತೆಯನು ಭಕ್ತಿಯಿಂ
ಬರೆದೋದಿ ಕೇಳಿದ ಜನರ
ವರಚಿಕ್ಕನಾಗಪುರದ ವೆಂಕಟೇಶನು
ಪೊರೆವನು ಸುಖವಿತ್ತು ದಯಂದಿ ೪೭

# ಮುನಿನಾಥನೈತಂದ ಮುದದಿ

ಕೇಳಿಲೆ ರಾಜ ನಾರದ ಮುನಿಯೈತಂದ
ಲೀಲೆಯಿಂ ರಾಷ್ಟ್ರದ ಸಿರಿಯಂ
. . ............ . ತಾನಂದವಡುತ ಭೂ
ಪಾಲನೆಡೆಗೆ ಬರುತಿರ್ದ ೧

ವನದೊಳು ಪರಿಮಳಗೊಂಡು ಮಾರುತ ತಾನು
ಮುನಿಗಳ ಮನವ [ಹಾರಿಸುತ]
ಘನಕೋಪದಿಂ ಪೋಪನೆಂಬಂತೆ ತಂಗಾಳಿ
ಯೆನುವಾಗಿ ಬೀ[ಸಿತೇ]ವೇಳ್ವೆ ೨

ಒಳಗಿರ್ದಡೆನ್ನ ಬಂಧಿಸಿಯಾಡಲಾಗದೊಳ್
ಸೆಳೆವರು ಯೋಗಿಗಳೆಂದು
ತಳೆದು ಕೋಪವ ಪರಿಮಳಗೊಂಡು ವಾಯುವು
ಬಳೆಸಿ ಬೀಸುತಲಿರ್ದ ಬಿಡದೆ ೩

ಕುಸುಮಗಳೊಳು ಸಾರವುಂಡು ಮತ್ತಗಳಾಗಿ
ಬಿಸಜದ ಬಳಿಗೆ ದಂಡೆತ್ತಿ
ಎಸೆವ ಝೇಂಕಾರದಿಂ ಮೊರೆಯುತ ತುಂಬಿಗಳ
ವಿಸರ ಕಂಗೊಳಿಸಿಯಾಡಿದವು ೪

ಹರಿಯಿಂದಿರಾಗಿಯುದಿಸಲಾಗ ಸಂತಸ
ಭರಿತದಿಂ ಮುನಿಗಳಂದದಲಿ
ನಿರುತವು ವನವಾಸಿಗಳಾಗಿ ಪದ್ಮಗ
ಳಿರುತಿರ್ದ ವದನಾನೇವೇಳ್ವೆ ೫

ಗಗನದಂವದಿ ಹಂಸಶೋಭಿತವಾಗಿ ವೃ
ಕ್ಷಗಳಂತೆ ಖಗವಾಸವಾಗಿ
ಮಿಗೆ ಭುವನೋದರವಹಾಗಿಯೆ ಹರಿಯಂತೆ
ಸೊಗಸಾಗಿ ಸರಸಿ ಶೋಭಿಸಿತು ೬

ನಿಂಬೆಯಂಬಟೆ ಚೂತ ಪನಸ ಖರ್ಜೂರ ದಾ
ಳಿಂಬ ನಾರಂಗ ಪುನ್ನಾಗ
ರಂಭ ಪೂಗಾದಿಗಳಿಂದಲಾ ವನರಾಜಿ
ಜೃಂಭಿಸುತಿರ್ದುದೇವೇಳ್ವೆ ೭

ತನ್ನೊಳಗಿಹ ಜನರಿಗೆ ಕಷ್ಟ ಬರದಂತೆ
ಚೆನ್ನಾಗಿ ನಗರ ವನಿತೆಯು
ತನ್ನ ದೇವತೆಗೆ ಹರಸಿಯಂಟ್ಟಿ ಪಸುರುಡಿ
ಯೆನ್ನುವಂತಿರ್ದುದಾ ವನವು ೮

ತರಣಿಯ ಕಿರಣಕೆ ತೆರಹುಗೊಡದೆ ಕೂಡಿ
ಯಿರಲು ಪರ್ಣಗಳು ಸಂಚರಿಪ
ನರರಿಗೆ ಬೆಳಕಾಗಲೋಸ್ಕರ ಕುಸುಮಂಗ
ಳರಳಿ ಶೋಭಿಸಿದವೇವೇಳ್ವೆ ೯

ಗಗನದೊಳ್ ತಾರಕಿ ರಾತ್ರಿ ಕಂಗೊಳಿಪುದು
ಜಗದೊಳಗೆಲ್ಲಿಯು ಇಲ್ಲಿ
ಹಗಲು ಭೂಮಿಯೊಳಿಹವೆಂಬಂತೆಯುಂದುರ್ದ ಪು
ಷ್ಪಗಳೊಪ್ಪಿರ್ದವು ನೋಳ್ಪ ಜನಕೆ ೧೦

ನಗರದಿಂ ಪೊರಮಟ್ಟು ಕರಿಯು ಮರಿಗಳಾಗ
ಹೊಗುತಾಗ ಸರಸಿಗಳ[ನ್ನು]
[ಅಗ]ಲಿಸಿ ತುಂಬಿಗ=ಳಿಂದಂಬುವಂ ಸೊಂಡಿ
ಲುಗಳಿಂದ ಕಲಕಿದ[ವಾಗ] ೧೧

ಕರಿದಾದ ಮೈಯ ವಾರಣಗಳು ಸರಸಿಯಿಂ
ಪೊರಟು[ತಾ] ಪೊಂಬಣ್ಣವಾಗಿ
ಸರಸಿಜರಜ ಉದುರಿರಲಾ ನೀರೊಳು ಮಿಂದು
ನೆರೆರಾಜಿಸಿದವತಿಮುದದಿ ೧೨

ತರುಣಿಯರುಗಳು ಸಖಿಯರೊಡಗೊಂಡತಿ
ಹರುಷದಿಂ ಸರಸಿ ತಡಿಯಲಿ
ಇರಿಸಿ ಭೂಷಣಗಳನೋರ್ವರೋರ್ವರ ಮೇಲೆ
ಎರಚುತ ಜಲವನಾಡಿದರು ೧೩

ಆಡುತ ಜಲದೊಳು ಕುಸುಮಂಗಳನ್ನು ಈ
ಡಾಡುತ ಕರಗಳ ಜಲವ
ತಾಡಿಸುತಂಘ್ರಿ ಹಸ್ತಗಳಿಂದ ರಾಗವ
ಪಾಡುತಲಿರ್ದರೇವೇಳ್ವೆ ೧೪

ಸಕಲನಾರಿಯರುದಕವ ಬಿಟ್ಟು ತಡಿಗೈದಿ
ಯಂಕಂಟಿಲೆಯರು ವಸನವನು
ರುಕುಮಗರ್ಭಗಳನುಟ್ಟೈಸೆದಾರಾನಂದದಿಂ
ದಖಿಳ ಭೂಷಣವಿಟ್ಟೊಪ್ಪಿದರು ೧೫

ವನ ಉಪವನ ಶಾಲಿ ಸರಸಿಗಳಂ ನೋಡು
ತನುವಾಗಿರ್ದರವಟ್ಟಿಗೆಗೆಗಳ
ಘನವಾದ ಸತ್ರಗಳನ್ನೀಕ್ಷಿಸುತ್ತಲಾ
ಮುನಿನಾಥನೈತಂದ ಮುದದಿ ೧೬

ಪುರವೋ ಭೂದೇವಿ ಸಿಂಗರವೋ ಮುಂಗಳಕೆ ನೀ
ಕರವೋ ಸ್ವಾಶ್ರಿತಕಲ್ಪತರುವೋ
ವರಪೂಬ್ಬನಿಲ್ಲದ ಕಿರುವೊಂದು ಗುಣವ ನ
ಗರ ವೊಪ್ಪಿತಿಂತು ನೋಳ್ಪರಿಗೆ (?) ೧೭

ಸಗರಾತ್ಮಭವರಶ್ವವಗಲ[ಲ]ರಸುವರೆ
ಬಗೆದಂತ ಬಳಿಯೋ ಎಂತೆಂಬ
ಬಗೆಯಿಂದಲೊಪ್ಪಿರುವಗಳು ಶೋಭಿಸಿತು[ರ]
ಗಗಳರಸಿನ ಲೋಕತನಕ ೧೮

ನಗರದ ದ್ವಾರದೊಳೈದುತ ವಂದಿಪ
ಗರ್ಗಣಿತದಾಶೀರ್ವಾಕ್ಯಗಳ
ಸೊಗಸಾಗಿ ಕೊಡುತ ವೀಣೆಯೊಳು ಶ್ರೀಹರಿಯುನಾ
ಮುಂಗಳ ಪಾಡುತ್ತಲೈದಿದನಂ ೧೯

ನೋಡುತ ನಗರದ ಸಿರಿಯು ರಾಯುನನು ಕೊಂ
ಡಾಡುತ ಕೀರ್ತಿಯಂ `ಪರಿಯಂ
ನೀಡುತ ನಮಿಂಪರಿಗಗಣಿತ ಹರುಷವ
ರೂಢಿಯಿಂದೈತಂದ [ಮುನಿ]ಯು ೨೦

ಉಪ್ಪರಿಗೆಗಳಂ ಸಾಲಾಗಿ ಬೀದಿಗಳೊಳಂ
ಇಪ್ಪಂ......ನದೂರೊಳು
ಬಪ್ಪರ ಬೀದಿಯೊಳ್ನೋಡುತ ನಾರಿಯಂ
ರಿಪ್ಪುದ [ಕಂಡ]ನಾ ಮುಂನಿಯು ೨೧

ಜಗದೊಳು ಚಂದ್ರನೋರ್ವನೆಯಿಪ್ಪನೀಪುರ
ದಗಲದ ಸೌಧಗಳೊಳಗೆ
ಅಗಲದಿಪ್ಪನಂ ಗೂಡೊಳೊಳಗೆಲ್ಲವೆಂಬೊಲಾ
ಸೃಗಳಿರ್ದವಬಲೆಯರುಗಳ ೨೨

ಸೌಧಗಳ್ಮುಂದೆಯಂಗಡಿಗಳು ಸಾಲಾಗಿ
ದೇದೀಪಿಸುತಲೆಸೆದಿರಲು
ಭೇದಭೇದನೋಪಸ್ಕರಗಳಿಂ ಪೂರ್ಣಗ
ಳಾದಾತ ನೋಡುತ್ತೈದಿದನು ೨೩

ಮುತ್ತಿನರಾಶಿಯು ಸುರಿದಂತೆ ಶುಭ್ರದ
ಮೊತ್ತವೆಂಬಂತೆ ತಂಡುಲವ
ಒತ್ತಾಗಿ ರಾಶಿಯು ಮಾಡಿಕೊಂಡಿರುವ ಸಂ
ಪತ್ತ ನಾನೆಂತು ಬಣ್ಣಿಸುವೆ ೨೪

ತಪ್ಪಿಲ್ಲದಂದ[ದ]ಲಾಯ್ದು ರಾಶಿಯು ಮಾಡಿ
ಯಿಪ್ಪ ತುಗುರಿಯು ಬೇಳೆಯುನು
ಬಪ್ಪರ ಬೀದಿಯೊಳ್ನೋಡುತ ಹಣವಿನ
ಕುಪ್ಪಿಯೆಂತೆಂದು ಪೇಳುತ್ತ ೨೫

ಹೆಸರು ಕಡಲೆ ಗೋಧಿ ಹಲಸಂದೆ ಮೊದಲಾದ
ಹೊಸಪರಿ ಧಾನ್ಯಗಳನ್ನು
ಪಸರದೊಳಿಟ್ಟು ಮಾರುವ ಕೋಮಟಿಗರ ಸಂ
ತಸವ ನಾನೆಂತು ಬಣ್ಣಿಸುವೆ ೨೬

ಶುಂಠಿ ಮೆಣಸು ಯಾಲಕ್ಕಿ ಹಿಪ್ಪಲಿ ಮೆಂತ್ಯ
ಗಂಟುಗೊನೆಯು ಪೋಡಿ ಸಹಿತ
ಅಂಟುವರಿಸಿನ ಸಾಸಿವೆಗಳ ಮಾರುವ
ರುಂಟಾದಂಗಡಿಗಳೊಪ್ಪಿದವು ೨೭

ಪರಿಪರಿಗಂಧಿಕ ದ್ರವ್ಯಸಹಿತ ಮಾರು
ತಿರುವಂಗಡಿಗಳ ನೋಡುತ್ತ
ಬರುತಿರ್ದ ನಾರದಮುನಿವರ ಸಂತಸ
ಭರಿತನಾಗುವುದನೇವೇಳ್ವೆ ೨೮

ನಿರುತ ಕುಬೇರಗೆ ಕಡಗೊಡುವವರೆಂಬ
ತೆರದಲ್ಲಿ ಚಿನ್ನವರದರು
ಸುರಿದುಕೊಂಡಿರುವರು ಪೊನ್ನರಾಶಿಯುನದ
ರಿರವನೇನೆಂದು ಬಣ್ಣಿಸುವೆ ೨೯

ಕನಕಪರ್ವತವೊಂದೆಯೆಂದಿರ್ದನಿಲ್ಲಿವೆ
ಕನಕಪರ್ವತವಪರಿಮಿತ
ಎನುತಲಾ ಮುನಿಯುಚ್ಚರಿಯು ತಾಳುತ್ತೈದಿದ
ಕನಕಗರ್ಭನ ಸುತ ತಾನು ೩೦

ರಜತಾಚಲ ಶಿವಗೊಂದು ನೋಡಲು ಇಲ್ಲಿ
ಭುಜಗೇಶಗಳವಲ್ಲೆಣಿಸಲು
[ನಿಜ]ವಾಸಯೆಂಬ ತೆರದಿ ರೂಪಾಯ್ಗಳ
ರಂಜುವಾದ ರಾಸಿಯೊಪ್ಪಿದುದು ೩೧

ತನ್ನುದರಾಜ್ಞದಿಂ ಬಂದ ಬ್ರಹ್ಮನಿಗಿವ
ನುನ್ನತ ಪ್ರಿಯಂದ ಮೊಮ್ಮಗನು
ಎನ್ನುವ ದಯುದಿಂದಲಿನಿತು ಸಂಪದವಿತ್ತ
ನನ್ಯರಿಗಿದು ಸಾಧ್ಯವಲ್ಲ ೩೨

ಶರಧಿಯೊಳ್ ಕೌಸ್ತುಭರತ್ನವೊಂದುದಿಸಲು
ಬೆರಗಾದರಖಿಳರಮರರು
ಜರೆಯುತ್ತಲಿವೆಯಂದನಿಲ್ಲಿ ರತ್ನದರಾಶಿ
ಹರಿಯೊಲವೆಂತೊದಗಿದುದೊ ೩೩

ಸಣ್ಣವು ನೀಟ ತೋರಿರಲು ನಾನಾ ವಿಧ[1]
ಕಣ್ಣಿಗೆ ಪ್ರಿಯುವಾಗಿ ಮುತ್ತೈ
ನುಣ್ಣಗೆ ಬಟುವಾಗಿಯಿರುವ ಮುತ್ತುಗಳನ್ನು
ಬಣ್ಣಿಪ ಕವಿ ಯಾರು ಜಗದಿ ೩೪

1 ವಿಧವಾಗಿ

ಸರಗಳ ಕೊಂಡುಹೋಗುತ ಧನವಂ ಕೇಡು
ಸುರಿವರು ಕ್ರಯವ ಮಾಡುವರು
ಒರೆಯದೆ ಕೊಂಬರು ಕೇಳದೆ ಸಂತೋಷ
ಶರಧಿಯಾಗಿರ್ದುದಾ ನಗರ ೩೫

ಸತತ ಲಕ್ಷ್ಮೀವಂತರೆಲ್ಲರು ಸೇವಕ
ತತಿಯು ಕಂಡರೆ ಪ್ರಿಯಕರರು
ಅತಿಶಯವಾದ ಮುಕ್ತಾಹಾರ ಹೃದಯ ಶೋ
ಭಿತರಾಗಿ ಹರಿಯುಂತೊಪ್ಪಿವರು ೬

ಬಿಳಿದು ಬಣ್ಣವು ಕರಿದರಿಸಿನ ಬಣ್ಣವು
ತೆಳುಗಾವಿ ಹಸುರು ನೀಲಾಭ್ರ
ಎಳೆಗೆಂಪು ಮೊದಲಾದ ಜವಳಿಯುಳ್ಳಂಗಡಿ
ಗಳು ಶೋಭಿಸಿದುವು ಸಾಲಾಗಿ ೩೭

ಸುರುತಿ ನಾರಂಜಿ ಕುತ್ತುನಿ ಸಕಲಾತಿಗ
ಳುರುತರವಾದ ಗಾದಿಗಳು
ಪರಿಪರಿಯಶಾದ ಸೂರೀ ಪುಟಗಳ ಪಶಾರು
ತಿರುವಂಗಡಿಗಳು ಒಪ್ಪಿದವು ೩೮

ಪುನುಗು ಜವ್ವಾಜಿ ಕಸ್ತೂರಿಯು ಕಮ್ಮೆಣ್ಣೆಯು
ಅಣಿಯಾದ ಪರಿಮಳಪುಡಿಯು
ನುಣುವಾದ ಭರಣಿಯೊಳಿರಲು ಕೊಳ್ಳುವರ ಸಂ
ದಣಿಯುಂಗಡಿಗಳೊಪ್ಪಿದವು ೩೯

ಸಂಚರಿಸುತ ನುಡಿಸುತಲನಿತರೊಳು
ವಂಚಿಸಿ ಸುಳಿದು ಪೋಗುತ್ತ
ಕಿಂಚಿತ್ತು ಕೊನೆಗಣ್ಣೊಳ್ನೋಡಿ ಒಲಿಪ ಸೋಂಪಿ
ನಿಂ ಚದುರೆಯರೊಪ್ಪಿದರು ೪೦

ಪರಿಪರಿ ರತ್ನ ಸುವರ್ಣ ಜವಳಿಗಳ
ಸಿರಿಸಿಕೊಂಡಿರುವಂಗಡಿಗಳ
ಪರಿಯನು ನೋಡುತ ಕುಸುಮಗಾಡಿಯಲಿರು
ತಿರುವೆಡೆಗೈದಿದ ಮುನಿಯು ೪೧

ಬೊಗಸೆಗಂಗಳ ಗುರುಕುಚದ ಚಂಪಕನಾಸ್ಯ
ದಗಣಿತ ವನಿತೆಯರಿಲ್ಲಿ
ಬಗೆಬಗೆಯಂ[ದದ]ಭೂಷಣಾನ್ವಿತೆಯರ್ ಪೂ
ವುಗಳ ಮಾರುತ್ತಲೊಪ್ಪಿದರು ೪೨

ಮಲ್ಲಿಗೆ ಮಂದಾರ ಪಾದರಿ ಹೊನ್ನೆಯು
ತ್ಪಲ ಪಂಕಜ ಸುರಗಿಗಳಾ
ಚೆಲ್ಲೆಗಂಗಳೆಯರು ಚಂಪಕಾದಿಗಳನ
ತ್ಯುಲ್ಲಾಸದಿಂ ಕೊಡುತಿಹರು ೪೩

ಜಾಜಿ ನೀಲಾಂಬುಜ ಸೇವಂತಿಕಾದಿಗಳ್
ರಾಜಿಪ ಪರಿಪರಿಯಾದ
ಸೋಜಿಗವನ್ನು ಕೊಂಬರಿಗೀವ ಕುಸುಮವ
ರಾಜೀವಾಕ್ಷಿಯರು ಮಾರಿದರು ೪೪

ಕುಸುಮಬಾಣನ ಕರದೊಳಗತಿ ಕ್ರೂರದಿಂ
ದೆಸೆವ ಕರಾರಿಯಂತಿರುವ
ಶಶಿಮುಖಿಯರು ಪರಿಪರಿಯಾದ ಪೂಗಳಂ
ಹಸರದಿ ಮಾರುತೊಪ್ಪಿದರು ೪೫

ಕರೆದು ಕರೆದು ಬೀದಿಯೊಳು ಪೋಗುವ ಪುರು
ಷರಿಗೆ ಬೇಕಾದ ಪುಷ್ಪಕವ
ಹರುಷದಿಂದೀಯುವ ನೆವದಲೊಲಿಸುವಂಥ
ತರುಣಿಯರ್ಮುದದಲೊಪ್ಪಿದರು ೪೬

ಬೆರಳುಗೊನೆಯೊಳಲ್ಲಿ ತಾ ಕುಸುಮದ ಸರ
ವರವ ಕೆಂಜಾಜಿ ಕೊಳ್ಳೆಂದು
ಕರೆದೀಯುವರು ಪಿಡಿದು ಕಿರಣಗಾಂತಿ
ವೆರೆಯಲಚ್ಚರಿಯ ಬೀರುತ್ತ ೪೭

ಕೇತಕಿ ಹೂವಿನ ಕಿರಿಸಯೆಳುಗಳನ್ನು
ತಾ ತರುಣಿಯು ಉಗುರುಗಳ
ರೀತಿಯ ಕಂಡೊರ್ವ ಕೇಳಲ್ಕೆದಿಯೆ ಕಂಡು
ತಾ ತಿರುಗಿದನು ನಾಚುತ್ತ ೪೮

ನಗೆಯ ಮಲ್ಲಿಗೆಯನ್ನು ಕುಂದದ ಮೊಗ್ಗನ್ನು
ಅಗಲದೆ ತೋರಿಸುತಲ್ಲಿ
ಲಗುಮಿಗೆಯತಿ ಮುಂದದಿಂದಿರ್ದಳಬಲೆ ಬೀ
ದಿಗರ ನೋಟದೊಳೊಲಿಸುತ್ತ ೪೯

ಕಕ್ಕಸಕುಚದ ಕೋಮಲ ಕಾಯಳೊರ್ವಳು
ಚಿಕ್ಕ ಪ್ರಾಯದ ಮೋಹಗಾತಿ
ಅಕ್ಕರದಿಂದ ಕುಸುಮಗಳ ಮಾರುತ
ಸುಕ್ಕಿಸುವಳು ನೋಳ್ಪರುಗಳ ೫೦

ನೋಟದೊಳುತ್ಪಲವನ್ನು ಮುಗುಳು ನಗೆ
ಯಾಟದಿ ಮಲ್ಲಿಗೆಯನ್ನು
ನೋಟಕರಿಂಗತಿ ಚಿತ್ರದಿ ತೋರುತ್ತ
ನೀಟಾಗಿ ಕುಸುಮ ಮಾರುವರು ೫೧

ಬೀದಿಯೊಳ್ಳೆದುತಲೊರ್ವನು[ಪೂಗ]ಳ
ಭೇದ ಭೇದದಿ ಮಾರ್ವರುಗಳ
ಸಾದರದಿಂ ನುಡಿಸುತ್ತ ಕುಸು[ಮಗೊಂಡು]
ತಾ ದಾರಿ ವಿಡಿದನು ಮುಂದದಿ ೫೨

ಮುನಿನಾಥನ್ನೈತಂದ ಮುಂದದಿ ೮೫

ಬೇಕಾದ ಕುಸುಮಂಗಳೀವೆನೆಂದಬಲೆಯು
ತಾ ಕೂಗಲೋರ್ವನ್ನೈತಂದು
ಏ ಕಂಜನೇತ್ರೆ ಪಾದರಿ ಪೂಗೊಡೆನ್ನಲ್ಕೆ
ತ್ತಾಕೆ ಕೋಪಿಸಿದಳೇವೇಳ್ವೆ ೫೩

ಕೇತಕಿ ಕಿರಿಕುಸುಮವ ನಾರಿ ಕೊಡಲೋರ್ವ
ಭೀತನಾಗಿಯೆ ದೂರಕೈದಿ
ಪಾತಕಿ ಕುಸುಮಗೊಡುವೆನೆಂದು ಗೀರ್ವರೆ
ತಾ ತಂದಳ್ಕನವ ನೋಡೆಂದ ೫೪

ಮತ್ತೋರ್ವನಂ ಕರದಬಲೆ ಮಲ್ಲಿಗೆಯುರ
ಳಿತ್ತಪೆನೆಂದು ಮೋದದೊಳಂ
ಮತ್ತಕಾಸಿನಿ ನಸುನಕ್ಕು ಸುಮ್ಮನೆಯಾದ
ಳತ್ತ ಸಾರಿದ ನಾಚಿಯುವನು ೫೫

ಕುಸುಮಗೊಂಬರೆ ಬನ್ನಿ ಎನ್ನೆಡೆಯೊಳಗೊಮ್ಮೆ
ಬಸವಳಿಯುಡೆಯಿರ್ಪವೆಂದು
ಶಶಿಮುಖಿ ಕರೆದು ಮೂಗಿನ ಮೇಲೆ ಬೆರಳಿಟ್ಟು
ನಸುನಕ್ಕು ನೋಳ್ಪಳೇನ್ ಸಿರಿಯೊ ೫೬

ಒಬ್ಬನ ಕಾಣುತ್ತಲಾನಂದಪಟ್ಟು ಮ
ತ್ತೊಬ್ಬನ ಕಂಡು ಬಾಡುತ್ತ
ಉಬ್ಬುವ ಹರುಷದಿಂ ತುಂಬಿ ಕೂಡಿರುವುದ
ನೊಬ್ಬಳು ಮಾರ್ದಳೇವೇಳ್ವೆ ೫೭

ಸಕಲವಾಗಿಹ ಕುಸುಮಂಗಳ ಚುಂಬಿಪು
ದಕೆ ತಾರದತಿ ಬಣ್ಣಗೂಡಿ
ವಿಕಸಿತವಾಗಿ ಶೋಭಿಪ ಕುಸುಮಗಳನ್ನು
ಸುಕುಮಾರಿ ಮಾರ್ದಳೇವೇಳ್ವೆ ೫೮

ಮಲ್ಲಿಗೆಯಲರ ಮಾಲೆಯ[1] ತುದಿವೆರಳ್ಗಳಿಂ
ದುಲ್ಲಾಸದಿಂ ಪಿಡಿದೆತ್ತಿ
ಚೆಲ್ವಾದ ಕೆಂಜಾಜಿ ಕುಸುಮವಿದೆಂದೀವ
ರಲ್ಲಲ್ಲಿ ಮಾಲೆಗಾತಿಯರು ೫೯

ವ್ಯಾಪಾರ ಗೈವರ ಕೊಂಬರ ಸಂದಣಿ
ರೂಪಾಯ ರಾಸಿಯಣ್ಣಗಳು
ಪೂಪರಿಮಳವೀವರಿಹ ಸಿರಿವಣ್ಣಿಪ
ಲಾಪವರಿಲ್ಲವೀ ಜಗದಿ ೬೦

ನಾರಿಯೋರ್ವಳು ಪರಿಮಳದ ದ್ರವ್ಯಂಗಳ
ಮಾರುತ ಕೊಂಬ ಜನರಿಗೆ
ಮಾರನ ಶರವನು ಎದೆಯೊಳಗಿರಿಸುತ
ತೋರುವಳತಿ ಮುದವನ್ನು ೬೧

ಬಹುವಿಧ ಪರಿಮಳ ತೈಲಗಳನ್ನು ಮ
ತ್ತಹಿಧರ ಹಿತನ[2] ಹೆಚ್ಚಿಸುವ
ಸಹಜದ ಗಂಧದಿಂ ಕೂಡಿದ ಕತ್ತುರಿ
[ಸಹಿತಲಿ] ಪುನುಗ ನೀಡುವರು ೬೨

ನೋಡುತ್ತಲೀ ವಿಧದವರಿಪ್ಪ ಸಾಲಿನ
ಮೋಡಿಯ ನಾರದ ಮುನಿಯು
ಪಾಡುತ ನಾರಾಣಾಖ್ಯ ನಾಮವ ನೆಲೆ
ವೀಡ ಕೇರಿಯ ಕಂಡನಾಗ ೬೩

ನಾಗವಳ್ಳಿಯನಿದನಾರು ಪ್ರೀತಿಯೊಳಗೆ
ಭೋಗಿಪರವರ್ಗೆ ಮನ್ಮಥನು
ಆಗುವ ಸುರಥಯುದ್ಧದಲಿ ಸಹಾಯಯೆಂ
ದಾ ಗಜಮನೆ ಮಾರಿದಳು ೬೪

---

1 ಪೂಮಾಲೆಯ, 2 ನಟಿತನ

ನಾರಿಯರೆಲೆವಿಂಡಿಗಳ ಬಿಚ್ಚಿ ಬಪ್ಪರ್ಗೆ
ತೋರುವರ್ ಕರಗಳನೆತ್ತಿ
ಧೀರ ಕೇಳ್ ಸ್ವರ್ಣಪತ್ರವಿದೆಂದು ಬಿಳಿಯೆಲೆ
ಮಾರುವ ಸ್ತ್ರೀಯರೊಪ್ಪಿದರು ೧೫

ಇಂತಪ್ಪ ವಿಸ್ತಾರವನ್ನು ನೋಡುತ್ತಲ
ತ್ಯಂತ ಸಂತೋಷವ ತಾಳಿ
ಮುಂತೋರ್ವ ಗಣಿಕ ನಾರಿಯರ ಕೇರಿಯನದ
ನುಂ ತಾನೆ ಕಾಣುತ್ತೈತಂದ ೧೬

ಬಾಗಿಲ ಮುಂದಿಪ್ಪ ಚಾವಡಿಗಳಲತಿ
ರಾಗದಿಂ ಕುಳಿತು ನೆತ್ತವನು
ಆಗಾಗ[1]ಯಿಡುತಲಾ ವಿಟಗೂಡಿ ಪಗಡೆಯು
ನಾಗಲಾಡುವರೇವೇಳುವೆನು ೧೭

ಚದುರಂಗವಾಡುತಲೋರ್ವ ವಿಟನು ತಾನು
ಸುದತಿಯು ಕೂಡೆ ಪೇಳಿದನು
ಮದಗಜಮಾನೆಯೊ ಪೊನ್ನಾನೆ ನಿನ್ನ ಕೈ
ಗುದುರೆ ಸಿಕ್ಕಿದೆ ನೋಡೆಯೆಂದ ೧೮

ಅರಸ ಕೂಡಿದೆ ಎನ್ನ ಮಂತ್ರಿ ಸಿಕ್ಕುತ ಪೋಗ
ದಿರುವಂತೆ ಮಾಡೆ ಸುಜಾಣೆ
ನೆರೆನೋಡಾಳಾದೆನ್ನ ನಿನ್ನ ಮನೋರಥ
ದಿರವೆನ್ನಿಂದಲಿ ನಿಂತಿತಲ್ಲ ೧೯

ಆನೆಯಿರಲು ನಿನ್ನ ಮನೆಯೊಳಗೆಲೆ ನೀರೆ
ನೀನೇಕೆ ಸೈರಿಸದಿಪ್ಪೆ
ಏನೆಂಬೆ ಒಡವೆ ಕೈಗುದುರೆ ತಾಳುವೆ ಸೋಲ
ಲಾನಾರು ನೀನಾರೆಂದುಲಿವೆ ೨೦

---

1 ವಾಗಾಗಿ

ಬಿಡು ಪೂರ್ವಸ್ನೇಹವ ದಾಕ್ಷಿಣ್ಯವೆನೆ ನೀ
ಪಡುವ ಸಂತಸವನೇವೇಳ್ವೆ
[ಬಡಗಾಲವಾ]ತನ ನೆಚ್ಚಿಯಿರುವೆಯೆಂದು
ನುಡಿದಳೋರ್ವಳು ದಿಕ್ಕ ನೋಡಿ ೭೧

ಮತ್ತೊಬ್ಬ ವಿಟನು ಗಣಿಕೆಯೊಡನೆಂದನು
ಮತ್ತಕಾಶಿನಿಯೆ ಕೇಳೆಂದು
ಬಿತ್ತರಿಸುವನಂತೆ ಪಾರಸಪ್ಪಕವನ್ನು
ಚಿತ್ತಜಶರದ ಕಾಲಾಗಿ ೭೨

ಭಾನುತೇಜಳೆ ನಿನಗತಿ ಮೆಚ್ಚಿ ಮನ್ಮಥ
ತಾನಿತ್ತನಿಂದುವದನೆಯೆ
ಆನಂದದಿಂ ತನ್ನ ಸಾರ್ವಭೌಮತ್ವವ
ನೇನೆಂಬೆ ನಿನ್ನಯ ಸಿರಿಯ ೭೩

ಸ್ಮರಕರಶರಳೆ ಸೌಮ್ಯಾಕಾರ ಫಣಿವೇಣಿ
ಗುರುಕುಚೆ ಸುಕವಿತೆ ಕೇಳೆ
ಕರಿಮಂದಗಮನೆ ನಿನ್ನನು ಬಿಟ್ಟು ಕ್ಷಣಮಾತ್ರ
ವಿರುವೆ ನಾನೆಂತು ಪೇಳೆಂದ ೭೪

ನೋಡುತ್ತ ಸೌಧದೊಳ್ಕುಳಿತು ಗಣಿಕೆಯರು
ರೂಢಿಯಿಂ ಬೀದಿಯೊಳ್ ಬಹರ
ಕೂಡಲೆ ಗಿಳಿಗಳ ನುಡಿಸುತ ವಿಟರೊಡ
ನಾಡುತ ಸರಸೋಕ್ತಿಗಳನು ೭೫

ಹೊಂದುತ ಹಾಗೆ ತಕ್ಕೈಸುತಲನಿತರೊಳ್
ಮಂದಹಾಸವ ಬಿಟ್ಟು ಮುನಿದು
ನಿಂದೆಗೈಯುತ ವಿಟನನ್ನು ಮುದ್ದಿಸುತಮು
ರೇಂದು ವದನೆಯರೊಪ್ಪಿದರು ೭೬

1 ಬಡಗಾಲವೆನೆಯಾ

ದೂತಿಯೋರ್ವಳುಂ ವಿಟ ಮುನಿದಿರಲಬಲೆಯೊಳ್
ಕೂಟಗೈಯುವ ಭರದಿಂದ
ಬೇಟಗಾತಿಯು ಪೇಳ್ವ ಮಾತುಗಳುಸುರುಂತ
ದಾಟಿಸುತಿರ್ದಳ್ ಕೋಪವನು ೭೭

ಕೇಳಲೆ ನೀರ ನೀ ಮುನಿವುದುಚಿತವಲ್ಲ
ಕಾಳಾಹಿವೇಣಿ ನಿನ್ನುವನು
ತೋಳುಗಳಿಂ x x x x x
x x x x x ೭೮

* — — — — — —

[ಖಾತಿಯು ಅಳಿಯು]ಲಾ ವಿಟನೈದಿ ತರುಣಿಯು
ಪ್ರೀತಿಯಿಂ ಬಿಗಿಬಿಗಿದಪ್ಪಿ
ದೂತಿಗೆ ಸಕಲ ಭೂಷಣವಿತ್ತು ಮನ್ನಿಸಿ
ಖ್ಯಾತಿಯು ಪಡೆದೆ ನೀನೆಂದ ೮೯

ಇಂತಪ್ಪ ನಾನಾ ಪರಿಯು ವಿಟಗಣಿಕೆಯು
ರಿಂ ತುಂಬಿ ಪೊಳೆವ ಬೀದಿಯನು
ಸಂತಸದಿಂದ ನೋಡುತ್ತ ನಾರದಮುನಿ
ಮುಂತೋರ್ವ ಕೇರಿಗೈದಿದನು. ೯೦

ಶಿವಪೂಜೆಗೈಯುತ ಜಂಗಮ[ರೈ]ದಲು
ವಿವಿಧೋಪಚಾರದಿಂ ಕೂಡಿ
ಅವನಿಯೊಳ್ ದಂಡದಂದದಿ ನಮಿಸುತ[ಲಿ]ಪ್ಪ
ಶಿವಭಕ್ತ ಕೇರಿಯೊಪ್ಪಿದುದು ೯೧

* ಇಲ್ಲಿಗೆ 53ನೆಯ ಗರಿ ಮುಗಿಯುತ್ತದೆ. 54ನೆಯ ಗರಿ ಇಲ್ಲ 55ನೆಯ ಗರಿಯಿಂದ ಮುಂದುವರಿಸಲಾಗಿದೆ.

ಕಂಡ ನೊಗ ನೇಗಿಲು [ಮಿ]ಣಿ ಕಣ್ಣಿಯಿಾಚಂಗಳ್
ಕುಡುಗೋಲು ಗುದ್ದಲಿಗಳನು
[ಸಡಗ]ರದಿಂದಲಾರೈವ ಒಕ್ಕಲಿಗ ಪಂ
ಗಡವಿಪ್ಪ ಕೇರಿಯೊಪ್ಪಿದುದು ೯೨

ಸಲು . ಕಂಬಳಿಗಾರ ಜೇಡ ಒ
ಕ್ಕಲಿಗರಡ್ಡಿಗ ಹಳ್ಳಿಕಾರ
ಕಲುಕುಟಿಕಾದಿ ನಾ[ನಾವಿಧವಾ]ಗಿಹ
ಕುಲಗೇರಿಯೊಪ್ಪಿತೇವೇಳ್ವೆ ೯೩

ತುರುಕ ಕಮ್ಮಾರ ಚಿಪ್ಪಿ[ಗ]xxxxx
ಕರಜಾತಿ ಸಹಬಹುವಿಧದ
ನರರಿಹ ಕೇರಿಗಳಮಿತವನೋ[ಡುತ]
[ಬರು]ತಿರ್ದಮುನಿಪನೇವೇಳ್ತೆ ೯೪

ಇಂತಪ್ಪ ನಾನಾ ವಿವಿಧವಾದ ಜಾತಿಗ
ಳಿಂ[ತೋರಿಪ್ಪೊ]ಳೆವ ಕೇರಿಗಳ
ಸಂತಸದಿಂದ ನೋಡುತ್ತ ದ್ರಾವಿಡಕೇರಿ
ಮುಂತೋರಲಲ್ಲಿ [ಸಾರಿದ]ನು ೯೫

ತಿರಿಚೂರ್ಣನಾಮಗಳಿಂದಲು ಕೊರಳೊಳು
ತಿರಿಪವಿ [ತ್ರಾ]ದಿಗಳಿಂದ
ತಿರುವಾರಾಧನೆಯು ಹರಿಗೆ ಮಾಡುತಸೆವಂ[ಧ]
ತಿರುಮಾಳಿಗೆಗಳೊಪ್ಪಿದವು ೯೬

ದಾಸೋಹಮೆನ್ನುತಾಚಾರ್ಯ[ರಿಗೆ]ರಗುತ
ವಾಸುದೇವನ ನೆನೆಯುತ್ತ
ಲೇಸಾಗಿ ಗಂಧಭೂಷಣ ವಸ್ತ್ರಮಾಲ್ಯಾದಿ
ಭೂಷಿತರಾಗಿಯೊಪ್ಪಿದರು ೯೭

ಶಂಖ ಚಕ್ರವು ಗದೆ ಪದ್ಮನಾರಾಯಣ
ನಂಕಿತವೊಪ್ಪಿ ಮುದ್ರೆಗಳ
ಪೊಂಕದಿ ಗೋಪಿ ಚಂದನ[1]ಗೂಡಿ ಧರಿಸಿದ
ಬಿಂಕದ ಮಾಧ್ವರೊಪ್ಪಿದರು ೯೮

ಗಿಂಡಿಯಂಪುಂಕಿ ಪೂಜೆವಿಡಿದುಂ ಸ್ನಾನವಮಾಡಿ
ಕೊಂಡು ಶ್ರೀ ವಿಷ್ಣುಪೂಜೆಯನು
ದಂಡೆಯಕಟ್ಟಿ ತುಲ[ಸಿ]ಗಳಿಂ ಮಾಡಲು
ಪ್ವ[ಂ]ಡದ ಮಾಧ್ವರೊಪ್ಪಿದರು ೯೯

ನಾರಾಯಣ ವಾಸುದೇವ ವಿರಲಕೃಷ್ಣ
ನೀ ರಕ್ಷಿಸೆಮ್ಮನೆಂದೆನುತ
ಚೀರುತ ಶ್ರುತಿಗೈವ ಮಾಧ್ವರಿಂ ತುಂಬಿದ
ಕೇರಿಯೊಪ್ಪಿದುದೇವೇಳ್ವೆ ೧೦೦

ವೇದನಾಲ್ಕನ್ನುಪದೇಶವ ಮಾಡುತ
ಲಾದರದಿಂದ ಶಿಷ್ಯರಿಗೆ
ಬೋಧಿಸುತಖಿಳ ಶಾಸ್ತ್ರಗಳನ್ನು ಸ್ಮಾರ್ತರಿ
ಪ್ಪಾದಿವ್ಯ ಕೇರಿಯೊಪ್ಪಿದುದು ೧೦೧

ಸ್ನಾನಸಂಧ್ಯಾಕರ್ಮ ದೇವತಾರಾಧನೆ
xxಕೇತನಶಿವರೆಂಬ
ದಾನವತಿಥಿಪೂಜೆಯುಂ ಮಾಳ್ಪ ವಿ[ಪ್ರರಿ]
ಪ್ಪಾನಂದಗೇರಿಯೊಪ್ಪಿದುದು ೧೦೨

ಇರಲಿಂತುಂ ವಿಪ್ರಸಮೂಹ[ವನೋ]ಡುತ
ಲಿರಗಲುಂ ತನಗನಿತರೊಳು
ಹರುಷದಾಳುತಲಿ ನಾರದಮುನಿ [ಕ್ಷತ್ರಿಯು]
ರಿರುವಂಥ ಕೇರಿಗೈದಿದನು ೧೦೩

---

1 ಛಂದಣ

ಕುದುರೆಗಳಂ ತಿದ್ದುತಾ [ಏರಿ ಬರ]ಲತಿ
ಮುದದಿಂದ ರಥಗಳ ನೋಡಿ
ಆದಕಶ್ವಗಟ್ಟಿಯಾಡುವ [ದಿಟ್ಟ ಬಾಲರ
ಭ್ಯ] ದಯುವ ಕಂಡನಾ ಮುನಿಪ ೧೦೪

ಸೌಧ ಸೌಧ [ಗಳೊಳು ಕು] ಳಿತು ನಾರಿಯರತಿ
ಮೋದದಿಂ ತಮ್ಮಾತ್ಮಭವರು
ಬೀದಿಯೊಳಗೆ[ಅಶ್ವ] ಗಳನೇರಿಯಾಳ್ವುದ
ಸಾದರದಿಂ ನೋಡುತಿಹರು ೧೦೫

ಪರಿ [ಪರಿ ಶ] ಸ್ತ್ರಾಸ್ತ್ರ ವಿದ್ಯಾಕೌಶಲಗಳ
ನರಿತಂಥ ನಿಪುಣರು ಮತ್ತೆ
ಅರಿಗಳಂ [ದುಳಿದಾ] ಕ್ಷಣ ಮೊರೆದೇಳ್ವವ
ರಿರುವಂಥ ಕೇರಿಯೊಪ್ಪಿದುದು ೧೦೬

ಹರಿಮು[ಯು]ವಾಗಿ ರಾಘವಸೈನ್ಯದಂತೆಸೆ
ದಿರುವ ಕ್ಷತ್ರಿಯಗೇರಿಯನ್ನು
ಹರುಷದಿಂ ನಾರದ ಮುನಿವರ ನೋಡುತ
ಲರಮನೆಯೆಡೆಗೆ ಸಾರಿದನು ೧೦೭

ದೇಶದೇಶದ ದೊರೆಗಳು ತಮ್ಮ ಸೇನೆಯು
ಘೋಷಿಸಿಕೊಂಡು ರಾಯನನು
ಲೇಸಾಗಿ ಕಾಣಲೋಸುಗ ಕಾಯ್ದಿರುವರ
ನೀಶನ್ಮುನೀಶ ನೋಡಿದನು ೧೦೮

ಘನವಾದುಪ್ಪರಿಗೆಗಳಿಂದಲು ವಾಲಗ
ಜನರಿಪ್ಪ ಚಾವಡಿಯಿಂದ
ಕುಣಿವ ಕುದುರೆಗಳ ಸಂದಣಿಯಿಂದ ಶೋ
ಭನವಾಗಿ ತೋರ್ದುದೇವೇಳ್ಗೆ ೧೦೯

ನಾನಾರೀತಿಯ ಪರಿರವಣೆಯ ಚಾವಡಿ
ನಾನಾ ವಿಚಿತ್ರವಾಗಿರಲು
ನಾನಾ ವಿದ್ಯವ ಬಲ್ಲುದ್ಯೋಗಿಗಳಿರುವುದ
ನೀ ನಾರದನು ಕಂಡನಾಗ ೧೧೦

ತಳುಕಂಗಳಿಂದಲದರ ಕೊನೆಯೊಳು ಬಹು
ಬೆಳಕ ಬೀರುವ ಮುಕ್ತಜಾಲ
ಹೊಳೆವ ಲೋವೆಯನುಳ್ಳ ರಾಯುಹಜಾರದ
ವಳ[1]ಯಕೆ[1] ಮುನಿಪನೈದಿದನು ೧೧೧

ಪಚ್ಚೆಯ ಕಂಬಗಳಿಂದಲದರ ಕೊನೆ
ಗಚ್ಚಶೋಭನವಾಗಿಯಿರುವ
ಅಚ್ಚರಿಗೆಲಸದ ಬೋದಿಗೆಗಳ ಕೂಡೆ
ಬೆಚ್ಚಂತೆ ತೊಲೆಗಳೊಪ್ಪಿದವು ೧೧೨

ಆ ತೊಲೆಗಳ ಬೆನ್ನ ಬಿಡ[ದಪ್ಪಿ]ಕೊಂಡಿಪ್ಪ
ಜಾತಿವಜ್ರದ ಜಂತೆಸಾಲು
ತಾ ತೋರಲೊಂದರ ಕಾಂತಿ [ಮತ್ತೊಂ]ದರೊ
ಳೀತ ನಾರದನು ನೋಡಿದನು ೧೧೩

ಸೋಪಾನಗಳ ಮೇಲೆ[ವಜ್ರವಸು]ರಿಸಲು
ವ್ಯಾಪಿಸಿ ಸೋಪಾನಕಾಂತಿ
ಈ ಪುರುಷನ ಕಾಯ ವಜ್ರವೆಂ[ದೆನುವಂತೆ]
[ತೋರ್ಪುದು]ಪೊಗಳಲೆನ್ನಳವೆ ೧೧೪

ಇನಶಶಿಕೋಟಿಕಾಂತಿಗಳ [ಕೀಳ್ಗಳೆವ ರ
ತುನದ]ಕಂಚ್ಚುಗಳಿಂ ವಿದ್ರುಮದ
ಅನುವಾದ ಕೊಂಬೆಗ[ಳಿಂದ ಒಪ್ಪುವ ಸೊಬ
ಗ]ನು ಮುನಿ ನೋಡುತ್ತೈದಿದನು ೧೧೫

---

1 ಯಿಂಕೆ

ದಂತಗಳಿಂದ ನಿರ್ಮಿಸಿಯಂದ[ರೊಳಗೆ ಅ]
ತ್ಯಂತ ಕಾಂತಿಯಂ ವಜ್ರವನ್ನು
ಅಂತರಂತರಕೆ ಹೊದ್ದಿಸಿದ ಬಾಗಿಲೊಳ್ಮುನಿ
ಸಂ [ತಸದಿಂದ] ಲೈದಿದನಂ. ೧೧೬

ವಳಯಕ್ಕೆ ಪೋಗಿಯಾಸ್ಥಾನವ ಸಾರಿದ
ಜಲಜಜ ತನುಜ ನಾ[ರದನು]
ಒಲವಿಂದ ವೀಣೆಯೊಳ್ ನಾರಾಯಣಾಯ ಓಂ
ಉಲುಹನಂ ತೋರುತ ಮು[ದದಿ] ೧೧೭

ಸಕಲಮಂತ್ರಿ ಪ್ರಧಾನಿಗಳೆಲ್ಲರಿದ್ದರು
ಮುಖವೆತ್ತಿ ನೋಡದೆ ರಾಯ
ಮುಕುರದಂತಿಹ ಕದಪಿನೊಳಂ ಕೈಯಿಟ್ಟು ಶೋ
ಕಕೆ ಚಿತ್ತವಿತ್ತಿರೆ ಕಂಡ ೧೧೮

ಚಿಂತಿಸುತಿರ್ದ ರಾಯನು ಮುನಿಯಂ ಕಾಣು
ತಂತರಂಗದ ಚಿಂತೆಗಿಂದು
ಅಂತಗಾಣುವೆನೆಂಬ ಹರುಷದಿಂದೊಂದಿಸಿ
ನಿಂತು ಕೈಮುಗಿದು ಪೂಜಿಸಿದ ೧೧೯

ಪಾದಯುಗ್ಮವ ತೊಳೆದುದಕವ ಶಿರದೊಳ
ಗಾದರದಿಂದ ತಾ ಧರಿಸಿ
ಮೇದಿನೀಶನು ಮುನಿಗರ್ಘ್ಯ ಶುದ್ಧಾಚಮ
ನಾದಿಗಳಿಂದರ್ಚಿಸಿದನು ೧೨೦

ನವರತ್ನಯುಕ್ತಪೀಠದಿ ಮುನಿಯೊಂದಿಸಿ
ಯವನೀಶ ಭಕ್ತಿಯಿಂ ಮಾಡ್ದ
ವಿವಿಧೋಪಚಾರ ಪೂಜೆಯ ಕೊ[ಂಡು] ಮುಂದದಿ ಕ್ಷೇ
ಮವನಂ ಕೇಳಿದನು ನಾರದನು ೧೨೧

ಪರಿಪರಿಯಂ[ಲಿ ಸರ]ಪಾಲ ಮನ್ನಿಸಲಾಗ
ಕರುಣದಿ ನಾರದ ಮುನಿಯು
ಪುರಜನ ಪxxxಶ ಜನರ ಕ್ಷೇಮ
ದಿರವನು ಕೇಳ್ದ ರಾಯನನು ೧೨೨

ನಿರುತವೀ ಧ್ರು[ವನ ಚರಿ]ತೆಯನು ಭಕ್ತಿಯಿಂ
ಬರೆದೋದಿ ಕೇಳಿದ ಜನರ
ವರ ಚಿಕ್ಕನಾಗ[ಪು]ರದ ವೆಂಕಟೇಶನು
ಪೊರೆವನು ಸುಖವಿತ್ತು ದಯದಿ ೧೨೩

# ಅಕಳಂಕ ಮಾನಸನಾಗ್ಯೆ

ಕೇಳಲೆ ರಾಜ ನಾರದಮುನಿಯಾಗ ಭೂ
ಪಾಲನೆ ರಾಜ್ಯದ ಪರಿಯ
ಮೇಳೆಂತಿರು[ವುದೆಂ]ದು ನುಡಿದನು ಸಂತಸ
ದಾಳುತ ಚಿತ್ತದಿ ತಾನು ೧

ಕುಶಲವೆ ನಿನ್ನ ರಾಷ್ಟ್ರವು [ನುಡಿ ರಾಯನೆ]
[ಹಸ]ನಾಗಿಪ್ಪುದೆ ವನರಾಜಿ
ಎಸೆವುದೆ ಧರ್ಮದಿಂ ನಿನ್ನಂತ [ರಂಗವು]
ಮುಸುಕದಿಪ್ಪುದೆ ಪಾಪಲೇಶ ೨

ಊಣಯು ಬಾರದಿಪ್ಪುದೆ ನಿನ್ನ ನುಡಿಗಳ್ಗೆ
ಕಾಣುವೆಯಾ ಪೂಜ್ಯರೆಂದು
ಕ್ಷೋಣಿಯುಸುರರನ್ನು ಸಕಲ ರಾಯರುಗಳು
ಕಾಣಿಕೆ ಕೊಡುವರೆ ನಿನಗೆ ೩

ಕ್ರೂರರೆ ಪಶಾತಿಗೆ ಬೆರೆಯುತ ನಿಪುಣರ
ಸೇರಿಸದಂತರ ಗೈದು
ಭೂರಿಪಾಪಗಳಿಗೆ ಹೆದರರರಸುಗಳು
ನೀ ರಚಿಸದೆಯಿಪ್ಪೆಯೇನ್ಯೆ

ಪ್ರಜೆಗಳನಳಲಿಸದಿಹೆಯ ರಾಜ್ಯದೊಳೆಲ್ಲ
ಸಂಜನರಾಗಿಹರೆ ಸಂತಸದಿ
ಕಂಜ[ನರ] ಶಿಕ್ಷಿಸಿ ನೆಲನ ಪಾಲಿಪೆಯೊ ನೀ
ಋಜುವಾಗಿ ಪೇಳೆಲೆ ರಾಯ ೫

[ನಾರಿಯ]ರ್ ತಮ್ಮಯ ಪತಿಯನೆ ಹರಿಯೆಂದು
ಭೂರಿ ಸಂತಸದಿ ಭಾವಿಪರೆ
[ಈರಾ]ಷ್ಟ್ರದೊಳಗೆಯಧರ್ಮವೆಂಬುದ ನೀನು
ಸೇರಿಸದಂತು ಪಾಲಿ[ಪುದು] ೬

ದುರುಳರಾದವರ ಶಿಕ್ಷಿಸುವ ಸಜ್ಜನರನ್ನು
ಕರುಣದಿಂ ಪಾ[ಲನೆಗೈವ]
* — — — — — — ೭

ಹರಿಯ ಪೂಜೆಯ ನೀನು ಹರುಷದಿಂ ಮಾಡದೆ
ಯಿರಲಾಗಿ ಚಿಂತೆ ತಾ [ನುಳಿದು]
ಎರಗಿತೊ ಹೃದಯಕೆ ಎಲೆರಾಜ ಪೇಳಯ್ಯ
ಜರಿದೆಯೊ ವಿಪ್ರರ [ಮುನಿ]ದು ೧೬

ಮಾನ್ಯರಾದವರ ನೀ ಮಾತನಾಡಿಸಿದೆಯ
ಮಾನ್ಯರ ಸ್ನೇಹವ ಮಾಡಿ
ನೀನೆಚ್ಚರವು ತಪ್ಪಿ ನಿಂತಿತೊ ಚಿಂತೆಯು
ನಾನೆಂತು ತಿಳಿವೆ ಪೇಳ್ ನಾಥ ೧೭

ಅಂತಃಪುರದೊಳಿರುವಬಲೆಯರತಿಮುದ
ವಂತರಾಗಿಹರೆ ನೀ ಒರೆಯ್ಯೊ
ತಂತಾವು ಕಲಹವ ತರದಿಪ್ಪರೆ ಪೇಳು
ಎಂತು ತಿಳಿವೆ ಚಿಂತೆಯನ್ನು ೧೮

* ಇಲ್ಲಿಗೆ 58ನೆಯ ಗರಿ ಮುಗಿಯಿತು. 59ನೆಯ ಗರಿ ಇಲ್ಲ. ಅರವತ್ತನೆಯ ಗರಿಯಿಂದ ಮುಂದೆ ಆರಂಭವಾಗಿದೆ

ನಿನ್ನ ಕೀರ್ತಿಯು ಜನನಿಕರ ಕೊಂಡಾಡುವ
ರುನ್ನತ ಚರಿತನೆಂದೆನಲಿದು
ಖಿನ್ನನಾಗಿಹೆ ನೀನು [ದುಃಖ]ಪಡದು ಸಂ
ಪನ್ನ ಪೇಳ್ ಚಿಂತಿಪ ಪರಿಯು ೧೯

ತಿಳುಹದಿರ್ದಡೆ ನೀನು [ತಿಳಿವುದೆಂ]ತದನಾನು
ಖಳರು ರಾಜ್ಯದಿ ಹೆಚ್ಚಿಯಿಹರೊ
ನಿಳಯುದೊಳಬ[ಲೆಯರೆಲ್ಲ] ಸಂತೋಷವ
ಬಳಸದಿಪ್ಪರೊ ಏನು ಪೇಳ್ಳೈ ೨೦

[ಎಂದಿಂತು] ಮುನಿವರ ಕೇಳಲು ರಾಯನು
ವಂದಿಸಿ ಕೈಗಳ ಮು[ಗಿದು]
[ಬಂದ] ಶೋಕದಿ ಕಂಠಕುಸುರು ಬಾರದೆ ಬಿಕ್ಕು
ತೆಂದನು ತನ್ನ ಯಾ[ತನೆಯು] ೨೧

ಏನೆಂದು ಪೇಳಲಿ ಏ ಮುನಿರಾಯನೆ
ನೀ ನೆ[ನ್ನೊ]ಳುಸುರುಸುರೆನಲು
ಈ ನೆಲದೊಳಗೆನ್ನ ಪೋಲ್ವದುಹೃದಯರಿ
ಲ್ಲೀ ನಾರದಾರ್ಯ ಕೇಳೆಂದ ೨೨

ಪಾಪಿಯಹಾದೆನ್ನನು ನುಡಿಸುವೆ ಯಾತಕ್ಕೆ
ಕಾಪಟ್ಯಬುದ್ಧಿಯಾದೆನ್ನ
ಸ್ತ್ರೀಪಾಣೆಗಡಕನಾದೆನ್ನನೆ ಮುನಿನಾಥ
ಭೂಪಾಲನೆಂದೊದರುತ್ತ ೨೩

ಕಠಿಣ ಚಿತ್ತನ ಕಲ್ಮಷಾಂಗನ ಕ್ರೂರನ
ಕುಟಿಲ ಮಾರ್ಗವನನುಸರಿಸಿ
ನಟಿಪಂಥ ಧೂರ್ತನ ದುಷ್ಟ ಮಾನವನತಿ
ಶಠನ ಮಾತಾಡಿಸಬಹುದೆ ೨೪

ನಾರಿಯುರೊಳು ಬೆರೆದವರ ಕೈವಶನಾಗಿ
ಕ್ರೂರಬುದ್ಧಿಯುನನುಸರಿಸಿ
ಭೂರಿಪಾಪಂಗಳಿಗಲಸದ ಮ[ನುಜ]ನು
ಸೇರುವನೆಂತತಿಸುಖವ ೨೫

ಕಿರಿಯುರಸಿಯು ದೆಸೆಯಿಂದತಿ ಚಿ[ಂ]ತೆಯು
ಬೆರೆದುದೆನ್ನಯ ಚಿತ್ತವುನಿಪ
ಒರೆವೆನಿನ್ನೇನ ವತ್ಸರವೈದರಣುಗನ
ದುರುಳೆಯುಟ್ಟಿದಳು ಕಾನನಕೆ ೨೬

ತರುಣನೆನ್ನೆಡೆಗೈದಿ ತೊಡೆಯ ಮೇಲ್ತನ್ನ ಕು
ಳ್ಳಿರಿಸಿಕೋಯೆಂದು ಬೇಡಿದರೆ
ಕರಕಷ್ಟನಾದಂಥ ನಾ ಸುಮ್ಮನಿರಲಾಗಿ
ದುರುಳೆ ಸಲಿಗೆಗಂಡಳಲಿದಳು ೨೭

ಕೋಪದಿಂದವಳು ಘರ್ಜಿಸಲಾಗಿ ಹಸುಳೆಯು
ತಾ ಪೋದ ಜನನಿಯಿದ್ದೆಡೆಗೆ
ಆ ಪಾಪಿ ಮನವಿಟ್ಟು ಕಳುಹಿದಳೇನೆಂಬೆ
ನೀಪರಿ ಚಿಂತೆಯಾಯ್ತೆಂದ ೨೮

ಚಿಂತಿಸಬೇಡ ನೀ ಚಿಣ್ಣನು ನಿನ್ನೆಡೆ
ಯು ತಾನೆ ಬಂದು ಸೇರುವನು
ಮುಂ ತೋ[ರು]ವದು ಸುಖ ವಾಸುದೇವನ ದಯ
ದಿಂ ತರುಣನು ಬಪ್ಪ ರಾಯ ೨೯

ಹುಲಿ ಕರಡಿಗಳು ಸಿಂಹಾ[ದಿ]ಮೃಗಗಳು
ನೆಲೆಯಾದ ವನದೊಳಗಣುಗ
ಸಲೆ ಬಾಳ್ವನೆಂತೆಂ[ದು ಪೋದ] ನುಳಿವನಂತೊ
ಎಲೆ ಮುನಿ ಚಿಂತಿಪೆನಿದಕೆ ೩೦

ಕಾನನದೊಳ[ಗೆ ತಾನಿ]ಹ ನೆಂತು ಬೆದರದೆ
ಏನೆಂಬೆನೆನ್ನ ಚಿತ್ತದೊಳು
ಯು ಚಿಂತೆ ತೋರ್ವದು ತಿಳಿಯದು
ಏ ನಾರದಾರ್ಯ [ಕೇಳಿ]ದನು ೩೧

ಎಂದಿಂತು ರಾಜ ಹಂಬಲಿಪುದ ಕಂಡು ಮು
ನೀಂದ್ರ ಪೇಳಿದನು ಭೂಪತಿಗೆ
ಕಂದಬೇಡಯ್ಯ ಚಿತ್ತದಿ ನೀನು ನಿನ್ನಯ
ಕಂದ ಬೇಗದಿ ಬಪ್ಪ ಮುದದಿ ೩೨

ಬರುತ ನಾ ಕಂಡೆ ದಾರಿಯೊಳು ಪೋಗುತಲಿದ್ದ
ಪರಿಯನೆಲ್ಲವನು ಕೇಳಿದೆನು
ಹರಿಯ ಕಟಾಕ್ಷಕೆ ಪಾತ್ರನಾಗಿಹ ಬೇಗ
ಬರುವನು ಚಿಂತಿಸಬೇಡ ೩೩

ಸಕಲಲೋಕಂಗಳಿಗಧಿಕವಾಗಿಹುದನ್ನು
ಸಂಕುಮಹಾರ ಹರಿಯಿಂದ ಪಡೆದು
ಪ್ರಕಟವಾಗಿಯೆ ಜನ ಕಾಂಬಂತೆ ಬಹನು ನೀ
ನಕಳಂಕಮಾನಸನಾಗೈ ೩೪

ಎಂದಿಂತು ಮುನಿವರ ಪೇಳಲಾ ರಾಯನಾ
ನಂದದಿಂ ನಾರದಗೆರಗಿ
ಕಂದನ ಮು[ಖ]ದರುಶನವಹ ಶಕುನವಿ
ದಿಂದು ನಿಮ್ಮಾಗಮವೆಂದ ೩೫

ಪರಮ ಪುರುಷರಡಿದರುಶನ ಬರಿದೆ ತಾ
ದೊರಕುವುದಲ್ಲದರಿಂದ
ಹರುಷವ ಪಡುವ ಕಾಲಕೆ ಲಭ್ಯವಹುದೆನ
ಗರಿದೆ ಚಿಂತೆಯಪೋಪುದೀಗ ೩೬

ರಾಯಂನೀಪರಿಯೊಂದಿಸಲಂ ನಾರದ ನಾ
ರಾಯಂಣ ನಾಮಂವ ಬಿಡದೆ
ಆಯುದ ವೀಣೆಯೊಳ್ ನುಡಿಸುತ ಸಾಗಿದ
ನಾಯಶಾ ದೇಶಗಳ ನೋಡುತ ೩೭

ಇತ್ತಲಾ ಧ್ರುವನು ನಾರದನನ್ನು ವಂದಿಸಿ
ಮತ್ತಾನಂದವ ತಾನು ಪಡೆದು
ಚಿತ್ತದಿ ವಾಸುದೇವನ ನಾಮಗಳ ನೆನೆ
ಯುತ್ತಡವಿಯೊಳಂ ಸಾಗಿದನು ೩೮

ನಿರುತವೀ ಧ್ರುವನ ಚರಿತೆಯನು ಭಕ್ತಿಯಿಂ
ಬರೆದೋದಿ ಕೇಳಿದ ಜನರ
ವರ ಚಿಕ್ಕನಾಗಪುರದ ವೆಂಕಟೇಶನು
ಪೊರೆವನು ಸುಖವಿತ್ತು ದಯದಿ ೩೯

# ಅನುಪಮ ಪುಷ್ಪದ ವನವು

ಕೇಳಲೆ ರಾಜ ನಾರದನುಪದೇಶಿಸಿ
ಬಾಲಕನಾನಂದದಿಂದ
ಪಾಲಿಪನಂತೆನ್ನ ವಾಸುದೇವನುಯೆಂದು
ಲೀಲೆಯೊಳ್ವನಕೆ ಸಾಗಿದನು ೧

ಕೈಲಾಸದಂತೆ ಗಗನದಂತೆ ಕೊಳದಂತೆ
ಲೀಲೆಯಿಂದತಿ ಸೌಖ್ಯವಾಗಿ
ನೀಲಕಂಠಾರ್ಕಕುಶಾಢ್ಯದಿಂ ವನವದು
ಬಾಲನ ಕಣ್ಗೆ ಕಾಣಿಸಿತಂ ೨

ಮನದಿ ಶ್ರೀವಾಸುದೇವನ ಪಾದಪದ್ಮವ
ನೆನೆಯುತ ಧ್ರುವನಂ ಸಂತಸದಿ
ಎನಗೊಲಿಯುವನೆಂತು ವರವೀವನೆಂತೆಂದುಂ
ತನಂಜ ಯೋಚಿಸುತ ಸಾಗಿದನು ೩

ಜನನಿಯಾಡಿದ ನುಡಿಗಳು ತಪ್ಪಲರಿಯುವೆಂ
ದೆನುತಲತ್ಯಂತ ಪ್ರೀತಿಯೊಳು
ಮುನಿವರನೆನಗೆ ಪೇಳಿದ ತೆರದಲಿ ಹರಿ
ಯನು ಕಾಣ್ವೆನೆಂದು ಸಾಗಿದನು ೪

ಮಧುವನವೆಂಬಂಥ ಪುಣ್ಯಸಾಗರವನ
ಮಧುರೆಯೆಲ್ಲಿಯಿಹುದೊ ನಾನೀಗ
ಮುಂದದಿ ಕಾಳಿಂದಿತೀರಕೆ ಪೋಪೆನೆಂತೆಂದು
ಒದಗಿ ಚಿಂತಿಸುತ ಸಾಗಿದನು ೫

ಮತ್ತಿಂತು ತರುಣ ಯೋಚಿಸುತನೋರ್ವನೆ ವನ
ದೊತ್ತಿಗೆ ಸಾಗಿ ನೋಡಿದನು
ಚಿತ್ತದಿ ತಾಳಿದ ಸಂತಸದಿರವನು
ಬಿತ್ತರಿಸುವ ಕವಿ ಯಾರು ೬

ಸುರಲೋಕದಂತೆ ರಾಘವಸೇನೆಯೊಲು ಪಾಂಡ
ವರ ತೆರದಲಿ ವನ ತಾನು
ವರ ಐರಾವತ ಸುಷೇಣಾರ್ಜುನಾದಿಗಳಿಂದ
ತರುಣನ ಕಣ್ಗೆ ಕಾಣಿಸಿತು ೭

ಮರಗಳೊಳ್ನಿಂಬೆಯು ಮರವು ಕಕ್ಕೆಯುಮರ
ಸುರಗಿಯು ಮರ ಮದವಸಲೆ
ಮರ ಹಾಲಿವಾಣದ ಮರಹಲವಿವುಯೆಂಬ
ಮರಗಳಿಂ ವನವು ಶೋಭಿಸಿತು ೮

ಮರಗಳೊಳಂಬಟೆಯಿಪ್ಪೆನೀರಿಪ್ಪೆಗಳ್
ಮರ ಗೋನು ಬೆಟ್ಟಗೋನೆಂಬ
ಮರ ಗಂಜಾಲದ ಮರವಂಕೋಲೆ ಮುತ್ತುಗ
ಮರಗಳಿಂದೊಪ್ಪಿತಾ ವನವು ೯

ಮರ ನುಗ್ಗೀ ಮರವರುಟಾಳ ಬಿಲ್ವತ್ತ್ರದ
ಮರ ಕಬ್ಬುಸುರಿವಟ್ಟನೆಂಬ
ಮರವೇಳಿಲೆಯು ಬಾಳೆ ಮರ ಬಿಳಿ ಲೋಧ್ರದ
ಮರಗಳಿಂದೊಪ್ಪಿತಾ ವನವು ೧೦

ಮರವು ಚೊತದ ಮರ ಗುಗ್ಗುಳ ಮರ ಬೆಳ್ಳ
ಮರ ರಾಯಬೋರೆಯೆಂತೆಂಬ
ಮರ ಮೊರವಿಯ ಮರವೆಲಚಿ ನೇರಿಲುಗಳ
ಮರಗಳಿಂದೊಪ್ಪಿತಾ ವನವು ೧೧

ಮರವು ತುಂಬುರಮರ ಮೋಕ್ಷತಿಲಕಘನ
ಮರ ಹವು(?)ಮಾಣಿಕವೆಂಬ
ಮರವು ಕೀರಿಯ ನೇವನಿಯ ಮರ ಕಬೀನನೆ(?)
ಮರಗಳಿಂದೊಪ್ಪಿತಾ ವನವು ೧೨

ಮರ ನನೆ ಕುರುಕ ಬೇವಿನಮರ ಪರಿಕದ
ಮರ ತೋರೆ ಮತ್ತಿಯೆಂತೆಂಬ
ಮರವು ಮುಗಿಲು ಗಡ ವನ ಮರವಡಿಕೆಯ
ಮರಗಳಿಂದೊಪ್ಪಿತಾ ವನವು ೧೩

ಮರ ಬಸುರಿಯ ಮರ ಹುಣಸಿಯ ಮರ ಹೊನ್ನೆ
ಮರ ಗೇರಮರ ಮತ್ತಿಯೆಂಬ
ಮರ ಕಮ್ಮತ್ತಿಯ ಮರ ಭುಜಪತ್ರೆ ಮರ ಹಾಲೆ
ಮರಗಳಿಂದೊಪ್ಪಿತಾ ವನವು ೧೪

ಮರವಿಂಗುಳದ ಮರ ಎಲವ ಬೂರುಗ ಮರ
ಮರ ಹುಲುಗಿಲು ತಪಸಿಗಳ
ಮರ ಮುಳ್ಳು ಮುತ್ತುಗ ಮರ ಬನ್ನಿ ಔಡಲ
ಮರ[ಗ]ಳಿಂದೊಪ್ಪಿತಾ ವನವು ೧೫

ಮರಗಳೊಳ್ತರಿಯದ ಮರ ದೇವದಾರೆಯ
ಮರ ಪಾದರಿಯ ನವಣೆಗಳ
ಮರವು ಹೆಮ್ಮರ ನೆಲ್ಲಿ ಮರ ತಾರೆಯಣಿಲೆಯ
ಮರಗಳಿಂದೊಪ್ಪಿತಾ ವನವು ೧೬

ಮರ ತುಪ್ಪ ದೇವದಾರುವಿನ ಮರವು ಬೆಳ
ಮರ ಕಮ್ಮೃರವು ಹಲಸೆಂಬ
ಮರತೋರೆಗಳಿಗಿಲ ಮರ ಬೇವು ಕಲ್ಲತ್ತಿ
ಮರಗಳಿಂದೊಪ್ಪಿತಾ ವನವು ೧೭

ಮರ ನೀರಸದ (?) ಮರ ಸಂಪಿಗೆ ಬಕುಳದ
ಮರವಶೋಕೆಯು ದಾಳಿಂಬಗಳ
ಮರ ಮೇಲೋಗರ ನೆಲ್ಲಿ ಮರ ಕೊಡಸಿಗನೆಂಬ
ಮರಗಳಿಂದೊಪ್ಪಿತಾ ವನವು ೧೮

ಮರ ತಮಾಲದ ಕಳವಿಯು ದೇವದಾಳೆಂಬ
ಮರ ಬಾಳೆ ಹೆಮ್ಮೃರ ಬಿದಿರ
ಮರ ತಾಳೆ ತೆಂಗು ಖರ್ಜೂರ ಬಗಿನಿಯೆಂಬೀ
ಮರಗಳಿಂದೊಪ್ಪಿತಾ ವನವು ೧೯

ಈ ರೀತಿಯಲಿ ಇನ್ನು ಪರಿಪರಿ ಮರಗಳಿಂ
ತೋರುವ ವನವ ನೋಡುತ್ತ
ಭೂರಿಪುಷ್ಪಗಳಿಪ್ಪ ವನವ ನೋಡುತ ಬಾಲ
ಸಾರುತಲಿರ್ದ ಮಾರ್ಗದಲಿ ೨೦

ಮನುಮಥ ಹರನಂತೆ ದ್ವಿಜನೊಲಿಂದ್ರನ ಹಾಗೆ
ಯನುಪಮ ಪುಷ್ಪದ ವನವು
ಘನಪಾಶುಪತಜಪ ವಜ್ರಗಳಿಂದಲಾ
ತನಯನ ಕಣ್ಗೆ ಕಾಣಿಸಿತು ೨೧

ಮಲ್ಲಿಗೆ ಮಂದಾರ ಪಾದರಿ ಸುರಹೊನ್ನೆ
ಮೊಲ್ಲೆ ಶಾವಂತಿಗೆ ಜಾಜಿ
ಉಲ್ಲಾಸ ಕರವೀರ ಮರುಗಪಚ್ಚೆಯು ತೆನೆ
ಯಲ್ಲಲ್ಲಿ ವನದಿ ಕಾಣಿಸಿತು ೨೨

ಕುಸುಮಂದೋಟಗಳ ನೋಡುತ ಮುಂದೆ ತೋರುವ
ಹಸನಾಗಿ ಮೂಲಿಕೆಗಳಿಗೆ
ಎಸೆವ ಗಂಧಿಕ ದ್ರವ್ಯಗಳಿಗೆ ಬೇಕಾದಂಥ
ಪೊಸಗಿಡುಮರಗಳ ಕಂಡ ೨೩

ಪರಿಪರಿ ಗಿಡಮೂಲಿಕೆಗಳು ಗಂಧಿಕದ್ರವ್ಯ
ಕರವಾದ ತರುಗಳಿಪ್ಪಂಥ
ವರವನ ರಾಘವನಂದದಿ ವೈದೇಹಿ
ವೆರಸಿ ಶೋಭಿಸಿದುದೇವೇಳ್ವೆ ೨೪

ನಸುಗುನ್ನಿಯಲಿಯಾಲ ಕಟುಕರೋಹಿಣಿ ಮತ್ತೆ
ಯುಸವದ ಗುಡಿಯುತ್ತರಣಿಯು
ಸಸಿಯಾಗಿ ಬೆಳೆದಂಥ ಕಿರಿದೇಗು ಹೆಗ್ಗುಳ್ಳ
ವಸತಿಯು ವನವು ಕಾಣಿಸಿತು ೨೫

ಬಳ್ಳಿದುರುಚಿ ಕೋಲು ಮುಕ್ಕ ಮೊರಲೆ ಹೊನ್ನೆ
ವಳ್ಳಿ ಹಿಪ್ಪಲಿ ಕಾಡಮೆಣಸು
ಹಳ್ಳತಿಟ್ಟುಗಳೊಳಗಿಹ ಗಜುಗದ ಗಿಡ
ಉಳ್ಳಂಥ ವನವು ಕಾಣಿಸಿತು ೨೬

ನೀಲಿನೆಗ್ಗಿಲು ಲಕ್ಕಿಹೆಡೆ ಮರದರಿಸಿನ
ಸಾಲಾಗಿ ಪೊಳೆವತಿಬಜೆಯು
ಮೇಲಾದ ಗುಲಗಂಜಿ ಯಾಸಡಿಯಿಹ ವನ
ಬಾಲನ ಕಣ್ಗೆ ಕಾಣಿಸಿತು ೨೭

ಗಿರಿಕರ್ಣಿಕೆಯು ವಿಷ್ಣುಕಾಂತಿ ಸಬ್ಬಸಿಗೆ ಮ
ತ್ತುರು ಕೊಳುಗುಳಿಕೆಯುಂ ಕಳ್ಳಿ
ವರಪಳಂಗವು ಗಿಲಿಗಿಚ್ಚೆ ದ್ರಾಕ್ಷಿಯು ಬೆಣೆ
ಗರಗವಿಪ್ಪಡವಿಶೋಭಿಸಿತು ೨೮

ತಿಗಡೆ ಕೆಂದಿಗಡೆಯಿಂನ್ನು ನೋಡೆ ಕರಿದಾದ
ತಿಗಡೆಯುಂ ನಷ್ಟಮೋದಕವು
ಮಿಗೆ ಸುಗಂಧಿಯುಂ ಪೋಲುಂ ಬದನೆ ಸರ್ಪಾಕ್ಷಿಯಿಂ
ಸೊಗಸಾಗಿದ್ದಡವಿ ಕಾಣಿಸಿತುಂ ೨೯

ಕುಂಬಳ ಬಿಳಿದಾದ ಕುಂಬಳ ಕರಿ ನೆಲ
ಗುಂಬಳ ಬೂದಿಗುಂಬಳವು
ಸಂಭ್ರಮದಿಂ ನೋಡೆ ಹಾಲುಗುಂಬಳವಿರು
ಮಿಂಬಾದ ವಿಪಿನ ಕಾಣಿಸಿತು ೩೦

ಕಾಡಹೆಸರು ಮಂಚಿಪತ್ರೆ ಮೂರೆಲೆಗನ್ನೆ
ರೂಢಿಯಂ ಹತ್ತಿ ಕೈಹೀರೆ
ನೋಡೆ ಹಡಲಕೊಳಿ ಕುಟುಮಾನ ಗೆಡ್ಡೆಯಿಂ
ಕೂಡಿದ ವಿಪಿನ ಕಾಣಿಸಿತು ೩೧

ಕುರಟಿಗೆಯಿಂತ್ತು ನಾಲಿಗೆಮುರೆ ಮಂಗಳ
ಕರ ನಾಗವಳ್ಳಿ ರೇಣುಕವು
ವರ ಕಳ್ಳಂಗಡಲೆ ದಾತಕಿ ಕುಸುಮಾದಿಗ
ಳಿರುವ ಕಾನನವು ಕಾಣಿಸಿತು ೩೨

ಯಾಲಕ್ಕಿ ಕಿರುನೆಲ್ಲಿ ಕೋಷಹಗರೆಜಮಾ
ತಾಳಿಬಂದರೆಗೆ ಕೂರಾಸಿ(?)
ಮೇಲಾದ ಬಿಳಿರಕ್ಕಸಿಯು ಹೊನ್ನಗನ್ನೆಯು
ಜಾಲಾದ ವಿಪಿನ ಕಾಣಿಸಿತು ೩೩

ಕರಿಬಂಟ ಕೋಷ್ಟಕ ಡುದ್ದೂತ ಗಜೆಮುಟ್ಟಿ
ಧರೆ ಮುನುವನು ನೆಲಬೇವು
ಕಿರಿ ಹಾರೆ ಪುಳ್ಳಂಬುಣಿಸಿ ಕೀಳು ಹರವೆಗೂ
ಡಿರುವ ಕಾನನವು ಕಾಣಿಸಿತು ೩೪

ತಗಚೆಯುಂ ತೊಂಡೆ ಕಂಗುಂಗೆ ನೀರುಳ್ಳಿ ಹಂ
ದಿಗ ಗಣಜಿಲೆ ಕಾಗೆ ಮಾರಿ
ಬಿಂಗೆ ಕಾಡ ಸಬ್ಬಸಿಗೆಯುಂ ಹಾವು ಮೆಕ್ಕೆಗ
ರುಗ ವಿಪಿನವು ಕಾಣಿಸಿತುಂ ೩೫

ಮುರುಗಲು ಕೈಸೋರೆ ಹೆಗ್ಗೊಣೆ ಸೌತೆಯು
ಗರಿಕೆ ಮೂಲಂಗಿ ಹಿಮ್ಮೈಕ್ಕೆ
ನೆರೆ ನೊದೆ ಭದ್ರಮುನಿಯು ದರ್ಭೆ ಲಾವಂಚ
ವಿರುವ ಕಾನನವು ಶೋಭಿಸಿತು ೩೬

ಹುಲ್ಲು ಮಾಗಿಯಹುಲ್ಲು ಛತ್ರಕಾರವುಯೆಂಬ
ಹುಲ್ಲು ಮರವಲ್ಲಿಯು ಹುಲ್ಲು
ವೆಳ್ಳಿಯು ಹುಲ್ಲು ಕರಡುಹುಲ್ಲು ಎಳದಾದ
ಹುಲ್ಲಿಪ್ಪ ವಿಪಿನ ಕಾಣಿಸಿತು ೩೭

ಮರಗಿಡಹುಲ್ಲು ನಾನಾವಿಧವಾಗಿರು
ತಿರುವ ಮೂಲಿಕೆಯಿಪ್ಪ ವನದಿ
ನಿರುತ ಸಂಚರಿಪ ಮೃಗಂಗಳ ನೋಡುತ
ತರುಣ ಸಾಗುತಲಿರ್ದ ಮುದದಿ ೩೮

ಕಿರುಬುಲಿ ಸಿಂಹ ಕೋಡಗ ಬೆಕ್ಕು ಕಾಡ್ಕೋಣ
ಕರಡಿ ಖಡ್ಗಮೃಗನರಿಯು
ಎರಳೆ ಸಾರಂಗ ಮುಸುವೆ ಕಾಡುವಂದಿಗ
ಳಿರುವ ಕಾನನವು ಕಾಣಿಸಿತು ೩೯

ಶರಭ ಕಡಸು ತೊಂಡಗುರಿ ಕಡವೆಯು ಹುಲ್ಲೆ
ಮುರುಡು ಸಾರಂಗವು ಮೊಲವು
ನೆರೆಹುಲಿ ಕಡವೆ ಚಮರಿ ಮೊದಲಾದಂಥ
ಪರಿಪರಿಮೃಗಗಾಣಿಸಿದವು ೪೦

ಕರಿನೊಣ ತೊಂಡಗಿ ಜಿರಿಲೆಯೋತಿಯು ವಲ್ಲಿ
ಜಿರಿಜೇಳು ಚಿಟ್ಟೆ ಮುಂಗಲಿಯು
ವರತುಂಬಿ ಚೀಮುಂಡೆ ಮಿಡಿಚೆ ಜೇನಿಗಪುಳು
ವಿರುವ ಕಾನನವು ಕಾಣಿಸಿತು ೪೧

ನೆರೆಹಾವು ಮಿಂಚುಬುಳುವು ಗೊದ್ದ ಕೆಂಜಿಗೆ
ಇರುವೆಯು ಜೇಡ ಪತಂಗ
ಧರಧರದಿಂದಿರುವಿವ ನೋಡುತಾ ಧ್ರುವ
ವರಮಧುವನಕೆ ಸಾಗಿದನು ೪೨

ವರಪಾರಿವಾಳ ಗಿಡಗ ಗೂಬೆ ಚೆಂಬೂತ
ಮರಕೂಟ ಚಮರ ಕಾಗೆಗಳು
ನೆರೆನೋಡೆ ಗವುಜುವಕ್ಕಿಯು ಭಾರದ್ವಾಜಗ
ಳಿರುವ ಕಾನನವು ಕಾಣಿಸಿತು ೪೩

ಕೋಳಿ ಕೊಕ್ಕರೆ ಗುಬ್ಬಿ ವಾಯಸ ಕೋಗಿಲೆ
ಮೇಲಾದ ಗಿಣಿ ಹಂಸ ಗರುಡ
ಹಾಲುಹಕ್ಕಿಯು ನವಿಲ್ಕುಕ್ಕರವಕ್ಕಿಯ
ಜಾಲದ ವನವು ಕಾಣಿಸಿತು ೪೪

ಸರಳೆ ಬೆಳ್ಳಕ್ಕಿ ಸಾರಸ ಜಕ್ಕವಕ್ಕಿಯು
ಗೊರವ ಗೀಜಗ ಹಸುಬಗಳು
ವರಗುಮ್ಮವಕ್ಕಿ ಲಾವುಗೆ ಬೆಬ್ಬಕ್ಕಿ ಚಕೋರ
ವಿರುವ ಕಾನನವು ಕಾಣಿಸಿತು ೪೫

ಮತ್ತೀ ಧ್ರುವನು ತಾನು ಶ್ರೀ ವಾಸುದೇವನ
ಚಿತ್ತದೊಳ್ಬಿಡದೆ ಭಾವಿಸುತ
ಅತ್ಯಂತ ಹರುಷಹೃದಯನಾಗಿ ಮಧುವನ
ದುತ್ತಮದೆಡೆಗೆ ಸಾರಿದನು ೪೬

ಹರಿಚರಣಾಬ್ಜಸಂಭವಳಿಗೆ ಸಖಿಯಾಗಿ
ಹರಿಯಿಂದ ಪಾವನಳಾಗಿ
ಹರಿಯುತ ನೋಡಿ ಮಿಾಯುವರ ಪಾಪವ ಪರಿ
ಹರಿಪಂಥ ಯಮುನೆಯೊಪ್ಪಿದಳು ೪೭

ಮುನಿಗಳ ಸಂಘವ ಕಂಡು ವೃಕ್ಷಗಳನ್ನು
ಘನವಾದ ಸರಸಿಗಳನ್ನು
ಅನುಪಮ ಲತೆಗಳ ನೋಡುತ ಧ್ರುವ ಮುಂದ
ವನ ತಾಳ್ದ ಪರಿಯನೇವೇಳ್ವೆ ೪೮

ನಿರುತವೀ ಧ್ರುವನ ಚರಿತೆಯನು ಭಕ್ತಿಯಿಂ
ಬರೆದೋದಿ ಕೇಳಿದ ಜನರ
ವರಚ್ಚಿಕ್ಕ ನಾಗಪುರದ ವೆಂಕಟೇಶನು
ಪೊರೆವನು ಸುಖವಿತ್ತು ದಯಂದಿ ೪೯

# ಎನ್ನೆಣೆಯಿಲ್ಲ ಮೂಜಗದಿ

ಕೇಳೆಲೆರಾಜ ಸಂತೋಷದಿಂ ಧ್ರುವ ತಾನು
ಲೀಲೆ[ಯಿಂ] ಮಧುವನಕೈದಿ
ಕಾಳಿಂದಿಯೊಳ್ ಮುದದಿಂ ಮಿಂದು ತಪಗೈದ
ಶೀಲವನೆಂತು ಬಣ್ಣಿಸುವೆ ೧

ತರಣಿಯುದಿಪ ಸಮಯದಲೆಮುನೆಯೊಳಾಗ
ಹರುಷದಿಂ ಮಿಂದು ಶ್ರೀಹರಿಯ
ಪರಿಪರಿಯಿಂ ಸ್ತುತಿಗೈಯುತ ಸೂರ್ಯನಿ
ಗೆರಗಿ ತಪಸಿಗೆತ್ನಗೈದ ೨

ಮೂರು ದಿವಸಕೊಮ್ಮೆ ಬದರಿಕಪಿತ್ಥದಾ
ಹಾರದಿಂ ಚೇತನಗೊಳುತ
ಯಿಾ ರೀತಿಯಲಿ ತಿಂಗಳೊಂದನು ದೇಹಾನು
ಸಾರದಿ ಕಳೆದನಾ ಧ್ರುವನು ೩

ಎರಡನೆ ತಿಂಗಳು ಬರಲಾರು ದಿನಕೊಮ್ಮೆ
ಕರಗಿದ ತೃಣಪರ್ಣಗಳನು
ನೆರೆಮೆದ್ದುಕೊಂಡಡವಿಯೊಳ್ ವಾಸುದೇವನ
ಚರಣವ ಭಾವಿಸುತಿರ್ದ ೪

ಮಾಸವೆರಡು ನಡೆಯಲು ಮತ್ತೆ ಮೂರನೆ
ಮಾಸದೊಳೊಂಬತ್ತು ದಿನಕೆ
ತಾ ಸೇವಿಸುತೊಮ್ಮೆಯುದಕವ ಚಿತ್ತದಿ
ವಾಸುದೇವನ ಧ್ಯಾನಿಸಿದನು ೫

ಮೂರು ಕಳೆಯೆ ನಾಲ್ಕನೆಯ ತಿಂಗಳೊಳು ಮತ್ತೆ
ಈರಾರು ದಿನಕೊಮ್ಮೆ ಮುದದಿ
ಧೀರ ತಾ ವಾಯುವನುಂಡು ಶ್ರೀಕೃಷ್ಣನ
ಚಾರುಚರಣವ ಧ್ಯಾನಿಸಿದ ೬

ಐದನೆ ತಿಂಗಳು ಬರಲಾಗಿ ಚಿತ್ತ ತಾ
ನೈದದಂದದಲೊಂದು ಕಡೆಗೆ
ಭೇದಿಸಿ ಶ್ವಾಸವ ಸೆಳೆದಂತರಂಗದಿ
ಮಾಧವನನ್ನು ಧ್ಯಾನಿಸಿದ ೭

ನಾಸಿಕಾಗ್ರದಿ ದೃಷ್ಟಿಯಿಟ್ಟು ತನ್ನಯ ಚಿತ್ತ
ಸೂಸದಂದದಲೊಂದು ಕಡೆಗೆ
ಶ್ವಾಸವ ಸೆಳೆದು ಹೃತ್ಪದ್ಮ ಕರ್ಣಿಕೆಯೊಳು
ವಾಸುದೇವನ ಧ್ಯಾನಿಸಿದನು ೮

ಉಂಗುಟಮಾತ್ರವನೂರಿ ಭೂಮಿಯೊಳು ಕ
ರಂಗಳ ನೆಗಹಿ ಮೇಲಕ್ಕೆ
ಹಿಂಗಿದ ಕವಲಿನ ತರುವಿನಂದದಲಂತ
ರಂಗದಿ ಹರಿಯ ಧ್ಯಾನಿಸಿದ ೯

ಎಡಬಲಕೊಲಿಯದೇಕಚಿತ್ತನಾಗಿ ಮ
ತ್ತಡಗಿಸಿ ವಾಸನೆಗಳನು
ಎಡಬಿಡದನಿಶ ಶ್ರೀವಾಸುದೇವನ ಚಿತ್ತ
ದೆಡೆಯೊಳು ಧ್ರುವನು ಧ್ಯಾನಿಸಿದ ೧೦

ತರುಣನ ತಪದ ಜ್ವಾಲೆಯು ಮೂರುಲೋಕವ
ನಿರದೆ ವ್ಯಾಪಿಸಿ ಸ್ವರ್ಗದಲಿ
ಇರುವಂಥ ಸುರರಿಗುಬ್ಬಸವಾಗೆ ಶಕ್ರನು
ಮೊರೆದೆದ್ದನೇವೇಳ್ವೆನದನು ೧೧

ಇದಕೇನು ಮಾಳ್ಪ ಯೋಚನೆಯು ಬಾಲಕ ತಾನು
ಮಧುವನದಲಿ ತಪಗೈವ
ಸುದತಿಯರಿಗೆ ಕದಲನು ಚಿಕ್ಕವನೆನ್ನು
ತೆದೆಯೊಳಗಿಂದ್ರ ಚಿಂತಿಸಿದ ೧೨

ಆಗಲೀ ತರುಣನ ತಪವನು ಕೆಡಿಪರೆ
ಪೋಗಿ ನೀವೆಂದು ದೇವೇಂದ್ರ
ಬೇಗೆಂದು ಸೂರ್ಯಾಗ್ನಿ ವಾಯುವರುಣರಿಗೆ
ರಾಗದಿಂ ನೇವಂವ ಕೊಟ್ಟ ೧೩

ಕಿರಣ ಸಹಸ್ರದಿಂದಲಿ ಕ್ರೂರ ತಾನಾಗಿ
ತರಣಿ ಕಾಸಿದನಣುಗನನು
ಭರದಿಂದಲಗ್ನಿ ಬಾಲಕನ ದೇ[ಹ]ವ ತಾನು
ಜ್ವರದಂತೆ ತಪಿಸಿದನಾಗ ೧೪

ನಾನಾಕಡೆಯ ಧೂಳುಗಳ ತಂದು ವಾಯುವು
ತಾನಣುಗನ ಮೇಲೆ ತೂರಿ
ಏನೆಂಬೆ ತನ್ನುರು ಶಕ್ತಿಯಿಂದಲಿ ಮತ್ತೆ
ಯಾನಂದದಿಂದ ಬೀಸಿದನು ೧೫

ಇರದೆ ಬಾಲನಮೇಲೆ ಜಲವ ನುಗ್ಗಿಸಿಯಂದು
ಕೊರೆವಂತೆ ಶೀತಲಮಾಗೆ
ತರುಣನಾವುದನರಿಯದೆಯಿರೆ ನಾಚಿಕೊಂ
ಡಿರದೆ ಸಾಗಿದನಿಂದ್ರನೆಡೆಗೆ ೧೬

ಈ ಪರಿಯೊಳು ನಾನಾವಿಧದಿ ವಿಘ್ನವು ಬಂದರಾ
ಪಸುಳೆಯು ಲೇಶವನ್ನು
ತಾ ಪಡೆಯದೆಯಾ ತನಯನಿದ್ದ ಹರಿಕೃಪೆ
ಯೋ ಪೂರ್ಣಪಂಜರವಾಗೆ ೧೭

ಕೇಳಿ ಶಕ್ರನು ಧ್ರುವ ಕಂಗೆಡದಿಪ್ಪುದ
ತಾಳಿ ಚಿಂತೆಯ ಯೋಚಿಸುತ್ತ
ಶ್ರೀಲೋಲನೊಬ್ಬನೆ ಗತಿಯಾತನಿಂಗೆ ನಾ
ಪೇಳುವೆನೆಂದು ಸಾಗಿದನು ೧೮

ಸುರರ ಸಂದಣಿಗೂಡಿ ನಾಗವಲ್ಲಭನ ಮೇ
ಲುರುವಮುದದಿಂದ ತಾನೇರಿ
ವರಕ್ಷೀರಸಾಗರದೆಡೆಗಿಂದ್ರ ಬಂದಂಥ
ಸಿರಿಯನೇನೆಂದು ಬಣ್ಣಿಸುವೆ ೧೯

ಇಂಗಡಲೆಡೆಗೈದಿ ಸಾಷ್ಟಾಂಗವೆರಗಿ ನಾ
ಮಂಗಳ ನುಚ್ಚರಿಸುತ್ತ
ಹಿಂಗಿನೆಮ್ಮಯ ಕಷ್ಟಗಳನೆಂದು ಸುರರು ಕ
ರಂಗಳ ಮುಗಿದು ಬೇಡಿದರು ೨೦

ದೇವ ರಕ್ಷಿಸು ದೇವದೇವ ಸೇವಿತಪಾದ
ದೇವಾರಿಕುಲ ದಾವಾನಲನೆ
ದೇವತೆಗಳು ನಾವು ತ್ವಚ್ಚರಣಾಬ್ಜದ
ಸೇವಕರೆಲೆ ದೇವದೇವ ೨೧

ಪಾಹಿ ಪಂಕಜನೇತ್ರ ಪಾಹಿ ಪಂಕಜನಾಭ
ಪಾಹಿ ಪಂಕಜಭವವಂದ್ಯ
ಪಾಹಿ ಪಂಕಜಭವಪತಿ ಶ್ರೀವಾಸುದೇವ
ಪಾಹಿಗೋಪಾಲ ಪಾಹೀಶ ೨೨

ರಾಮ ರಾಜೀವಾಕ್ಷ ಸೋಮಶೇಖರ ಸಖ
ಕಾಮಜನಕ ಸೂರ್ಯಧಾಮ
ಪ್ರೇಮದಿಂ ಸಲಹು ಕೃಪಾಮಹೋದಧಿ ಶುಭ
ನಾಮಭಜಕ ಜನಪ್ರೇಮ ೨೩

ಮುರಹರ ಕೇಶವ ಸುರವರನುತ ಪಾದ
ಸರಸಿರುಹಾನಂತ ಚರಿತ
ಕರುಣಾಸಾಗರ ಭವಹರ ಲಕ್ಷ್ಮೀಹೃದಯ ಪಂ
ಕರುಹ ಭಾಸ್ಕರ ವಾಸುದೇವ ೨೪

ನಾರಾಯಣಾಚ್ಯುತ ಪಾರರಹಿತ ಶುಭ
ಚಾರಿತ್ರ್ಯಪಂಕಜನೇತ್ರ
ಘೋರದುರಿತ ಸಂಹಾರಕ ಮುನಿವಂದ್ಯ
ಶ್ರೀರಮಣನೆ ವಾಸುದೇವ ೨೫

ಇಂತೆಂದು ಸುರರು ಸ್ತುತಿಸಲತಿಕರುಣದಿಂ
ಕಂತುಜನಕ ಬೇಗಬಂದು
ಚಿಂತೆಬೇಡೆಂದಭಯವನಿತ್ತು ಸರ್ವರ
ಸಂತಸಬಡಿಸಿದನಾಗ ೨೬

ಹರಿಯು ಪೇಳ್ದೊರಲಮರರವನಿಯೊಳತಿ
ಹರುಷದಿಂದೆರಗಲಚ್ಯುತನು
ಕರುಣಿಸುತಭಯವ ಬೆದರಬೇಡೆನ್ನುತ
ಸುರರ ಸಂತವಿಸಿದನಾಗ ೨೭

ತಂದಿರೆ ಬಾಲನ ತಪಸಿನೂಳಿಗವ ನೀ
ವಿಂದು ಪ್ರಾರ್ಥಿಸಲೇತಕೆನ್ನ
ಕಂದನೆಡೆಗೆ ಪೋಪರೆಚ್ಚರಿಪರೆ
ಚಂದವಾಯ್ತೆಂದನಾ ಹರಿಯು ೨೮

ಬಳಲಿದನತಿತಪದಿಂದಲಾ ಬಾಲಕ
ತಳುವಿದವಕಟ ದಿನಗಳು
ಬಲಿದು ರಕ್ಷಿಪೆನುಬ್ಬಸವ ಪರಿಹರಿಪೆ ನೀ
ವಳುಕ ಬೇಡೆಂದನಚ್ಯುತನು ೨೯

ಸಕಲ ದೇವತೆಗಳ ಕಳುಹಿ ತ್ವರಿತವಾಗಿ
ಅಕಳಂಕ ಮಹಿಮ ಶ್ರೀ ಹರಿಯು
ನಿಖಿಲವಾಗಿಹ ಭಕ್ತಸಂದಣಿಗೂಡಿ ಬಾ
ಲಕನಿಪ್ಪ ವನಕೆ ತಾ ಬಂದ ೩೦

ಸುರಪತಿಯಾನೆಯನೇರಿ ಅಗ್ನಿಯು ತನ್ನ
ವರ ತಗರನ್ನು ತಾ ಹತ್ತಿ
ಪರತರ ಮಹಿಷವನೆಮನಡರಿಯೆ ಬಂದ
ರಿರದೆ ಶ್ರೀಕಾಂತನ ಬಳಿಯ ೩೧

ನಿರುತಿ ವರುಣ ವಾಯು ಧನದನೀಶಾನ್ಯ ತ
ಮ್ಮುರಂತರ ವಾಹನವೇರಿ
ಗರುಡನ ಹೆಗಲೊಳು ಕುಳಿತು ಶ್ರೀಕೃಷ್ಣನು
ಬರುವ ಸಂಭ್ರಮವನೇವೇಳ್ವೆ ೩೨

ಸುತ್ತಲು ಬಹಳ ಮುತ್ತಿನ ಸತ್ತಿಗೆಗಳುರೆ
ಎತ್ತಿದವೆಡಬಲದಲ್ಲಿ
ಉತ್ತಮವಾದ ಚಾಮರಗಳೋಲೆಯ ಹರಿ
ಯತ್ಯಂತ ಮುದದಿ ತಾ ಬಂದ ೩೩

ಬಾಲಕ ಧ್ರುವ ತಪಗೈಯುತಲಿಹ ಬಳಿ
ಗಾ ಲಕ್ಷ್ಮೀಪತಿ ದಯಗೂಡಿ
ಲೀಲೆಯಿಂ ಬರಲಲ್ಲಿರುವ ಮುನಿವರರೆದ್ದು
ಪಾಲಿಸೆಂದರಗಿದರೆಲ್ಲ ೩೪

ಕಣ್ಣಮುಚ್ಚಿಯೆ ಹೃದಯಾಬ್ಜದಿ ಹರಿಯನ್ನು
ಚೆನ್ನಾಗಿ ಧ್ಯಾನಗೈಯುತ್ತ
ಉನ್ನತಾನಂದದಿಂದಿರುತಿರ್ದು ಹರಿಬರಲ್
ಕಣ್ಣರಳಿಸಿ ನೋಡ್ದನಾಗ ೩೫

ಹರುಷಮಾನಸನಾಗಿ ಧರಣಿಯೊಳ್ ದಂಡದಿಂ
ದು[1]ರಂ ಭಕ್ತಿಯಿಂದ ತಾ ನಮಿಸಿ
ಕರವ ಮುಗಿದು ನಿಂದು ಸ್ತುತಿಗೈಯಲರಿಯದ
ತರುಣನ ನೋಡ್ದನಚ್ಯುತನು ೩೬

ಸ್ತುತಿಗೈಯಲರಿಯದ ಧ್ರುವನ ಗಲ್ಲಗಳ ತಾ
ನತಿದಯದಿಂದ ಶ್ರೀ ಹರಿಯು
ಶ್ರುತಿಮಯ ಶಂಖದಿಂದೊತ್ತಲಾ ಬಾಲಕ
ಮಿತಿಯಿಲ್ಲದೊಲು ಪೊಗಳಿದನು ೩೭

ಉತ್ತಮೋತ್ತಮ ಪರಿಪೂರ್ಣ ಕೇಶವನೆ
ವಾಗ್ವೃತ್ತಿಗಾಧಾರ ನೀನಾಗೆ
ಬಿತ್ತರಿಸುವೆನೆಂತು ನಿನ್ನ ಗುಣಂಗಳ
ಚಿತ್ತಸಾಕ್ಷಿಕ ನಮೋಯೆಂದ ೩೮

ಸರ್ವ ಚೈತನ್ಯಾತ್ಮ ಸರ್ವೇಶ ಸರ್ವಗ
ಸರ್ವಧಾರನೆ ಪರಮೇಶ
ಸರ್ವಾಧಿಕಾರ ಪರ್ವತರಿಪುವಂದ್ಯನೆ
ಸರ್ವವ್ಯಾಪಕ ಸಲಹೆಂದ ೩೯

ತಾರಕಿಗಣನೆಗಂಡಡೆಯು ವೃಷ್ಟಿಯ ಬಿಂದು
ತೋರಿದಡೆಯುಂ ಲೆಕ್ಕಕೀಗ
ಶ್ರೀ ರಮಣನೆ ನಿನ್ನ ಮಹಿಮೆಯ ಗಣಿಸುವ
ಡಾರಿಗೆ ವಶವಪ್ಪುದೆಂದ ೪೦

---

[1] ತು

ಪರಮ ಪಾವನ ಮುರಹರ ಪದ್ಮನೇತ್ರ ಶ್ರೀ
ಕರರೂಪ ಗೋಪಾಲಕೃಷ್ಣ
ಶರಣುಹೊಕ್ಕೆನು ನಿನ್ನ ಚರಣಪಂಕೇಜವ
ಕರುಣಸಾಗರ ನೀನುದ್ಧರಿಸೈ ೪೧

ಸುರತರುವನ್ನಾಶ್ರಯಿಸಿಯತ್ತಿಕಾಯಿಯ
ನೆರೆ ಬಯಸುವನಂತೆ ನಿನ್ನ
ಚರಣವ ನಾರಿ ಸ್ವರ್ಗಾಧಿಭೋಗವ ಕೇಳ್ವ
ನರಗುರಿಗಳ ನಾನೇನೆಂಬೆ ೪೨

ಕ್ಷೀರಸಾಗರದ ಸನಿಯಕ್ಕೈದಿ ಚೌಳಾದ
ನೀರನರಸುವವನಂತೆ
ಪಾರಿಜಾಕ್ಷನೆ ನಿನ್ನ ನೇರಿದ ಮೇಲೊಂದ
ಧೀರನಾದವ ಬಯಸುವನೆ ೪೩

ನಿನ್ನ ಚರಣಪದ್ಮಸೇವೆಯಲ್ಲದೆ ಸುಖ
ವನ್ನೀವ ಭಾಗ್ಯ ಮತ್ತೊಂದು
ಇನ್ನುಂಟೆಯದರಿಂದಲರಿವುಳ್ಳರ್ ತ್ವತ್ಪಾದ
ವನ್ನೆ ಭಾವಿಸಿ ಸುಖಿಸುವರು ೪೪

ಕಾಣದಿಪ್ಪವದಾವನಂಘ್ರಿಯ ನಿಗಮಗಳ್
ಕಾಣದಾವನ ಬ್ರಹ್ಮಾದಿಗಳು
ಆ ನಿನ್ನ ಚರಣ ಸಾರಸವ ಕಂಡೆನಗೆಣೆ
ಗಾಣೆ ಮೂಲೋಕದೊಳ್ ದೇವ ೪೫

ಧನ್ಯ ನಾನು ದೇವ ನಿನ್ನಯ ಪಾದಗ
ಳನ್ನು ಸಂತೋಷದಿಂದೀಗ
ಕಣ್ಣಾರ ಕಂಡು ನಿಂದಿದಿರೊಳು ನುತಿಗೈಯ
ವೆನ್ನೆಣೆಯಿಲ್ಲ ಮೂಜಗದಿ ೪೬

ತ್ರಾಹಿ ಭಕ್ತಾಧೀನ ತ್ರಾಹಿ ದೀನಾವನ
ತ್ರಾಹಿ ನಿಗಮಂತತಿ ಸ್ತುತ್ಯ
ತ್ರಾಹಿ ಸುರಸ್ತುತ ತ್ರಾಹಿ ದೈತ್ಯಾಹಿತ
ತ್ರಾಹಿ ಸರ್ವೇಶ ಗೋವಿಂದ ೪೭

ತ್ರಾಹಿ ಪಂಕಜನೇತ್ರ ತ್ರಾಹಿ ಪಾವನ ಗಾತ್ರ
ತ್ರಾಹಿ ನಾರದಕೃತ ಸ್ತೋತ್ರ
ತ್ರಾಹಿ ಭಜಕಮಿತ್ರ ತ್ರಾಹಿಸುಚಾರಿತ್ರ
ತ್ರಾಹಿ ದುರಿತಧ್ವಾಂತಮಿತ್ರ ೪೮

ಹಲವು ವಿಧದ ಯೋಗಸಿದ್ಧರು ಪರ್ಣಾಂಬು
ಫಲವಗೊಳ್ಳದೆ ವಾಯುವುಂಡು
ಒಲಿಸಲರಿಯರಾವನನ್ನು ಮತ್ತಾನಿನ್ನ
ಸುಲಭದಿಂ ಕಂಡೆ ನಾನೆಂದ ೪೯

ಮರೆಯೊಕ್ಕೆನೆನಲು ವಾತ್ಸಲ್ಯದಿಂದಲಿ ನೀನೆ
ಬರಲಭಯವ ಕೊಡಲಾಗಿ
ನೆರೆ ಕಂಡೆನಲ್ಲದೆ ನಿಗಮಗೋಚರ ನಿನ್ನ
ದರುಶನವೆಂತು ಸಿಕ್ಕುವದು ೫೦

ನಿನಗಿಂದ ಮಿಗಿಲು ನಿನ್ನಡಿಸೇವಕರು ಮತ್ತೀ
ಗೆನಗೆ ನಾರದ ದರುಶನವು
ಅನುವಾಗಿ ಸಿಕ್ಕಲಾನಂದದಿಂ ತ್ವತ್ಪಾದ
ವನಜವ ಕಂಡೆ ಗೋವಿಂದ ೫೧

ಆದರಿನಿಂದಲಿ ನಿನ್ನ ಪದವನೋಲಗಿಸುವ
ಸದಯರ ಸಂಗವನೆನಗೆ
ಮುದದಿಂದ ಪಾಲಿಸಿ ಪೊರೆ ವಾಸುದೇವನೆ
ಮಧುಸೂದನಾಚ್ಯುತಾನಂತ ೫೨

ನಿರುತವು ಬಿಡದತಿಯಾಸಕ್ತಿಯಿಂದ ತ್ವ
ಚ್ಚರಣಾಬ್ಜ ಯುಗ್ಮಗಳಲ್ಲಿ
ಉರುಭಕ್ತಿಯಿಂದೆನ್ನ ಚಿತ್ತ ವರ್ತಿಸುವಂತೆ
ಕರುಣಿಪುದೆನಗಭಯವನು ೫೩

ಸುರಪತಿ ಮಕುಟರತ್ನಗಳು ನೋಂಕಲು ಸಂಖ
ಶರಧಿಯೆನ್ನಿಸಿ ಇಂದ್ರನನ್ನು
ಪೊರೆದ ಪಾವನಪಾದಗಳಿಗೆರಗುವಪೊಲು
ಕರುಣಿಸು ವರಗಳನೆನಗೆ ೫೪

ನಿರುತವು ನಿಗಮ ಕಾಣದ ನಿನ್ನ ಮೂರ್ತಿಯು
ಪರಿಯನೀಕ್ಷಿಸುವೋಲೆನ್ನ
ವರನೇತ್ರ ವಿಷಯಗ್ಯೆಯುವ ಹಾಗೆ ದಯದಿಂದ
ಕರುಣಿಪುದೆನಗಭಯುವನು ೫೫

ಹರಿ ಕೃಷ್ಣ ರಾಮ ಗೋವಿಂದ ಮಾಧವ ಮಂರ
ಹರ ನಾರಾಯಣ ವಾಸುದೇವ
ಪೊರೆಯೆಂದು ಬಿಡದಿಂತು ಎನ್ನ ನಾಲಿಗೆ ನೆನೆ
ವರೆ ಬಾರ[ದೆ][1]ಲೆ ದೇವದೇವ ೫೬

ಆನಂದದಿಂದ ನಿನ್ನಯ ಪಾದಪದ್ಮಕ್ಕೆ
ಶ್ರೀನಿವಾಸನೆ ಭಕ್ತಿಯಿಂದ
ಸಾನುರಾಗದಿ ಸಮರ್ಪಿಸಿದ ತುಲಸಿ ಗಂಧ
ಕೀ ನಾಸಿಕವು ಬರಲೆನ್ನ ೫೭

ಕೊರಳಿದು ನಿನ್ನಡಿಯುಗ್ಮಕೊಪ್ಪಿಸಿದ ಪೂ
ಸರಗಳ ಧರಿಸುವ ಹಾಗೆ
ನಿರುತ ವಾಸಿಯು ಮಾಡುವಂತಭಯು[ವ][2] ಬೇಗ
ಕರುಣಿಸು ಕರುಣಾನಾಗರನೆ ೫೮

---

1 ನೆ, 2 ವು

ನಿತ್ಯ ನಿನ್ನಯ ಶುಭಕಥೆಗಳನಾಲಿಸು
ವತ್ಯಂತ ವಿಷಯವನೀಗ
ಚಿತ್ತಸಾಕ್ಷಿಕ ಎನ್ನ ಕಿವಿಯೆಂಬ ಬಯಸುವವೋ
ಲಿತ್ತಭಯವ ಕಾಯೊ ದಯದಿ ೫೯

ಕರಗಳು ನಿನ್ನಡಿಯುಗ್ಮಪೂಜೆಯ ಬಿಡ
ದುರುಭಕ್ತಿಯಿಂ ಸರ್ವಕಾಲ
ಇರದೆ ಮಾಡುವ ತೆರದಲಿ ಬಹು ದಯದಿಂದ
ಕರುಣಿಸೊ ಎನಗಭಯವನು ೬೦

ನಿರುತವೆನ್ನಯ ಪಾದಯುಗ್ಮ ನಿನ್ನನು ಬಿಡ
ದುರುಭಕ್ತಿಯಿಂದಲಿ ಬಳಸಿ
ಎರಗಿ ಮೋಕ್ಷವ ಪಡೆಯುವ ತೆರದಲಿ ಕೃಷ್ಣ
ಕರುಣಿಸೊ ಎನಗಭಯವನು ೬೧

ಒಲ್ಲೆನನ್ಯವನೆಲೆ ಗೋವಿಂದ ತ್ವದ್ಭಕ್ತ
ರೆಲ್ಲಿಪ್ಪರಲ್ಲಿಯೆನ್ನುವನು
ನಿಲ್ಲಿಸು ದಯದಿಂದ ತ್ವನ್ನಾಮಗಳ ನಿತ್ಯ
ಉಲ್ಲಾಸದಿಂ ನೆನೆವಂತೆ ೬೨

ಮರೆಸುವದಖಿಳ ಕ್ಲೇಶಂಗಳ ದೋಷವ
ತೊರೆಸುವದದರಿಂದ ನಿನ್ನ
ಚರಣಸೇವಕರ ಸಂಗವು ದೇವ ನೀನದ
ಕರುಣಿಸಿ ಸಲಹಬೇಕೆನ್ನ ೬೩

ಇಂತೆಂದು ತರುಣ ಪ್ರಾರ್ಥಿಸಿ ಪಾದಕೆರಗಿಯೆ
ನಿಂತು ನೋಡಲು ತನ್ನ ಧ್ರುವನು
ಕಂತುಜನಕ ವಾಸುದೇವನಾಲಿಂಗಿಸಿ
ದಂಥ ಸಂಪದವನೇವೇಳ್ವೆ ೬೪

ಬಳಲಿದೆ ತಾತ ನೀ ತಪಗೈದೆಂದಚ್ಯುತ
ನೊಲಿದು ಬಾಲನ ಮೈಧೂಳನ್ನು
ಚೆಲುವಾದಂಬರಗೊನೆಯಿಂದೊರಸುತ ಮುದ
ದಳೆದು ನೆತ್ತಿಯನಾಘ್ರಾಣಿಸಿದ ೬೫

ಸಕಲಲೋಕಂಗಳಿಗಧಿಕವಾಗಿಹಂದ ಬಾ
ಲಕ ನಿನಗಿತ್ತೆ ನಾನೀಗ
ಸುಕುಮಾರ ಕೇಳು ರಾಜ್ಯವನಾಳು ಧರ್ಮದಿಂ
ದಖಿಳ ಸಂಪದಗೂಡಿ ಬಿಡದೆ ೬೬

ತರಣಿ ಸೋಮಾದಿ ತಾರೆಗಳಿಗಾಧಾರವಾ
ಗಿರುವಂಥ ಲೋಕವನೀಗ
ಕರುಣಿಸಿದೆನು [ಏಳು] ನಿನಗೆಲೆ ನನ್ನವ
ರಿರುವರನಂತ ಮತ್ತಲ್ಲಿ ೬೭

ನಿರುತವು ಸುಖಕರವಾಗಿಹುದಲ್ಲದೆ
ಅರಸಿದೊಡೊಮ್ಮೆಯು ಕಷ್ಟ
[1][ವಿರದಂಥ]ಲೋಕವನಿತ್ತೆ ನಾ ನಿನಗೆ ಮ
ಚ್ಚರಣಸೇವಕನೆ ನೀ ಕೇಳೈ ೬೮

ಧರಣಿಯು ನೀನೆ ಇಪ್ಪತ್ತಾರು ಸಾವಿರ
ವರುಷ ಧರ್ಮದಿ ಪಾಲಿಸಯ್ಯ
ವರಯಜ್ಞದಿಂದೆನ್ನನರ್ಚಿಸಿ ಸುಖಕ್ಷೀರ
ಶರಧಿ ಲೋ[ಕ]ವ ಪಡೆಯಯ್ಯ ೬೯

ನಿನ್ನನುಜನುಯೆಂಬುತ್ತಮನ ಯಕ್ಷನು ಕೊಲ್ವ
ನಿನ್ನೇವೆನೆಂದು ಸುರುಚಿಯು
ತನ್ನಣುಗನನರಸುವರೈದಿ ಕಾಳ್ಗಿಚ್ಚಿ
ಗನ್ನವಾಗುವಳು ಕೇಳಯ್ಯ ೭೦

---

1 'ಯಿರುವಂಥ' ಎಂಬ ಪಾಠವಿದೆ ಸಂದರ್ಭಕ್ಕೆ ವಿರುದ್ಧವಾದ ಅರ್ಥಕೊಡುವುದರಿಂದ ಇದನ್ನು 'ಇರದಂಥ' ಎಂದು ತಿದ್ದಿಕೊಂಡಿದೆ.

ನೀನವನಿಯ ಧರ್ಮದಿಂದಾಳಿ ಮದ್ಭಕ್ತ
ರಾನಂದದಿಂದಿಪ್ಪ ಬಳಿಗೆ
ಬಾ ನನ್ನ ಭಾಗ್ಯಸಾಗರನೆಯೆಂದಪ್ಪಿದ
ಶ್ರೀನಾಥನೇಂ ದಯಾನಿಧಿಯೋ ೭೧

ತರುಣನಿಗೀಪರಿ ವರಗಳ ಕರುಣಿಸಿ
ಹರಿಯಂತರ್ಧಾನದಿ ಸಲಲು
ಸುರರು ಹೂವುಳೆಗರೆಯುತ ಜಯಯೆಂದಂಥ
ಸಿರಿಯನೇನೆಂದು ಬಣ್ಣಿಸುವೆ ೭೨

ನಿರುತವೀ ಧ್ರುವನ ಚರಿತೆಯನು ಭಕ್ತಿಯಿಂ
ಬರೆದೋದಿ ಕೇಳಿದ ಜನರ
ವರಚಿಕ್ಕನಾಗಪುರದ ವೆಂಕಟೇಶನು
ಪೊರೆವನು ಸುಖವಿತ್ತು ದಯದಿ ೭೩

# ಲಾಲಿಸಿದಳು ಪ್ರಿಯೋಕ್ತಿಯಲಿ

ಕೇಳೆಲೆ ರಾಜ ಶ್ರೀಹರಿಯಂತರ್ಧಾನದಿ
ಲೀಲೆಯಿಂ ನಿಲಲಾಗ ನೋಡಿ
ಬಾಲಕ ಕಾಣದಚ್ಯುತನ ನೆನೆದು ನೆನೆ
ದಾಲಿದ ಪರಿಯು ನೇಸೆಂಬೆ ೧

ಹರಿಯೆ ನೀನಿಂತು ನಿರ್ದಯನಾಗಲಾನಿನ್ನು
ಧರಣಿಯೊಳುಳಿವೆನೆ ನಿನ್ನ
ಚರಣಗಳಿಂಗೆರಗುವೆ ದಯದೋರಿ ನೀ
ಪೊರೆಯನ್ನನೆಲೆ ವಾಸುದೇವ ೨

ಆನತಜನಸುರಧೇನು ದಯಾನಿಧಿ
ದೀನಜನಾವನಶೀಲಾ
ನೀನಲ್ಲವೇನೆಲೆ ದೇವಯೆನ್ನನು ಇಂಥ
ಕಾನನದೊಳು ಬಿಡಬಹುದೆ ೩

ಆರೆನಗಿನ್ನೆಲೆ ದೇವ ರಕ್ಷಿಸುವರಾ
ಧಾರವೀ ಮೂಲೋಕದಲ್ಲಿ
ದಾರಿಯು ತೋರೊ ದಮ್ಮಯ್ಯ ನಿನ್ನಡಿಗಳ
ಸೇರಿದೆನಲ್ಲ ಗೋವಿಂದ ೪

ಜೀವ ನಿಲ್ಲುವ ಬಗೆಯಿಲ್ಲ ನಿನ್ನಂಘ್ರಿಯು
ಸೇವೆ ತಪ್ಪಲು ಜಗನ್ನಾಥ
ಈ ವನದೊಳಗೆನ್ನನೋರ್ವನ ಬಿಡುವರೆ
ದೇವ ಚಿತ್ತವು ಬಂದುದೆಂತೊ ೫

ಶಿಶುಗಳ ಕಾಣುತಲಾಗಲಾ ಮಾತೆ ರ
ಕ್ಕಸಿಯಾಗಲಾ ತರುಣರ್ಗೆ
ದೆಸೆ ಯಾರ ನೀತಿ ನೀನುಳಿಯಲೆನ್ನುವನು ಪೋ
ಷಿಸುವರಾರಕಟ ಗೋವಿಂದ ೬

ಪಾದಸೇವೆಯೆ ಗತಿಯೆಂದು ಸೇರಿದೆ ನಿನ್ನ
ನೀ ದಾರಿಗೈವದುಚಿತವೆ
ಬಾಧಿಸುತಿದೆಯೆನ್ನ ತ್ವದ್ವಿರಹಜ್ವರ
ಮಾಧವ ದಯಬಾರದೇನೈ ೭

ಪರಮಪಾವನತರ ಚರಿತ ನಾರಾಯಣ
ಕರುಣಾಸಾಗರ ಭವಹರನೆ
ದುರಿತಾರಿ ನೀನಾದಡೆನ್ನ ಕ್ಲೇಶವ ಪರಿ
ಹರಿಸು ಬೇಗದಿ ಬಂದು ಕೃಷ್ಣಾ ೮

ಇಂತೆಂದು ಬಹುವಿಧವಾಗಿ ಹಂಬಲಿಸಿಯು
ನಂತನ ದಯದಿಂದ ಧ್ರುವನು
ತಂತಾನೆ ತಿಳಿದು ತನ್ನೂರಿಗೈದಿದ ಮುದ
ವಂತನಾಗಿಯೆ ಚಿತ್ತದಲಿ ೯

ಗಿರಿನದಿವನಕೂಪಗಳ ಕಳೆದಚ್ಯುತ
ಚರಣವ ನೆನೆಯುತ ಧ್ರುವನು
ಇರದೆ ತನ್ನಯಪುರಕೈದಿದ ಸಿರಿಯು ಬಿ
ತ್ತರಿಪರೆನ್ನಳವೆ ಸರ್ವವನು ೧೦

ಊರ ಮುಂದಣ ವನಕ್ಕೈದಿದ ಧ್ರುವನನ್ನು
ಪೌರಜನರು ಕಂಡು ಮುಂದದಿ
ಸಾರಿ ದೂತರು ನೃಪನೆಡೆಗೆ ಪೇಳಲು ಚಿಂತೆ
ದೂರಕೆ ಪೋದುದೇನೆಂಬೆ ೧೧

ಬಂದನೆ ಎನ್ನ ಚಿತ್ತಾಬ್ಜಭಾಸ್ಕರನೀಗ
ಬಂದನೆ ದಿಟವೆ ನಿರ್ಣಯಂವೆ
ಬಂದನೆ ಎನ್ನ ಚಿಂತೆಯು ಕೆಡಿಪರೆ ನೀವು
ಬಂದನೆಂಬಿರೊ ಏನೋಯೆಂದ ೧೨

ತರುಣ ಕಾನನಕೆ ಪೋದನು ಬಪ್ಪನೆಂತಿದು
ಬರಿಯು ಮಾತಹುದು ನಿಶ್ಚಯವು
ಬರಲಿಲ್ಲವೆನ್ನಾತ್ಮಸಂಭವನೆನ್ನುತ
ಧರಣೀಶನಿದು ಸಟೆಯೆಂದ ೧೩

ಪಾಪಿಯಾದವ ನಾನು ತರುಣನ ಕಾಣ್ಬೆನೆ
ಶ್ರೀಪತಿ ಕರುಣದಿನೆಂತೊ
ಏ ಪುಣ್ಯಪುರುಷರಿರೇನು ಪೇಳಿರೊ ಬಂದ
ನೇ ಪುತ್ರನೆಂದ ಭೂಪಾಲ ೧೪

ಅನಿತರೊಳಲ್ಲಿಗೆ ನಾರದ ಮುನಿವರ
ಘನಕೃಪೆಯಿಂದ ತಾ ಬಂದು
ಮನದಿ ಸಂಶಯ ತಾಳಿಯಿರುವ ಭೂಪಾಲನೊ
ಳನುವಾಗಿ ಪೇಳಿದನಾಗ ೧೫

ರಾಜ ನಿನ್ನಣುಗನೈದಿದನಿದು ಸಟೆಯಲ್ಲ
ರಾಜೀವಾಕ್ಷನ ಕೃಪೆಯಿಂದ
ಸೋಜಿಗವೇನಿದು ಹರಿಯೊಲಿ[ದೊಡನೆಯು][1]
ಮಾಜಿತು ರಾಯನ ಚಿಂತೆ ೧೬

1 ದಡೆಯನ

ಹರುಷದಿಂದೆದ್ದವನೀಶ ನಾರದನಡಿ
ಗೆರಗಿ ದೂತರಿಗೆ ಪ್ರೀತಿಯೊಳು
ಪರಿಪರಿ ಭೂಷಣ ವಸನಗಳಿತ್ತು ಮ
ತ್ತಿರದೆ ಕೈಮುಗಿದನೇನೆಂಬೆ ೧೭

ಕರೆಸಿ ಮಂತ್ರಿ ಪ್ರಧಾನಿಗಳಿಗೆಂದನು ಪುರ
ವರವ ಶೃಂಗರಿಸಿ ನೀವೆಂದು
ಹೊರಟನಾಕ್ಷಣ ಪುರದಿಂದ ತನ್ನಣುಗನ
ನೆರೆ ಕಾಣ್ವೆನೆನ್ನುತಲಾಗ ೧೮

ಕೂಡಲೆ ಹಯ ಗಜ ರಥಗಳು ಮುಂದಾಗಿ
ಜೋಡಿಸಿ ನಡೆದವು ಮಂದಿ
ಮೋಡಿಯುಂದಾಯುಧ ಭೂಷಣ ವಸನದಿಂ
ಕೂಡಿಯೆ ನಡೆದರುತ್ಸವದಿ ೧೯

ವರಮಣಿಮಯದ ಪಲ್ಲಕ್ಕಿಗಳಮಿತವು
ತರುಣಿಯರೇರಿ ಬಪ್ಪುದಕೆ
ಇರದೆಡೆಯಹಾಡಿದವದರ ಸಂತೋಷದ
ಪರಿಯ ನಾನೆಂತು ಬಣ್ಣಿಸುವೆ ೨೦

ನಗರದ್ವಾರದಿಂ ಪೊರಟು ಮುಂದಿಹ ವನ
ದಗಣಿತ ಸಿರಿಯ ನೋಡುತ್ತ
ಒಗುಮಿಗೆ ಹರುಷದಿಂದಾರಾಯ ತನ್ನ ಸೇ
ನೆಗಳಿಂದ ಕೂಡಿಯೈದಿದನು ೨೧

ಬರಲಾಗ ಜನಕ ಜನನಿಯರು ಕಂಡತಿ
ಹರುಷದಿಂ ಧ್ರುವನು ತಾ ಬಂದು
ಶಿರವಿಟ್ಟು ತಂದೆಯಂಘ್ರಿಯೊಳು ನಮಿಸಿದಂಥ
ಸಿರಿಯ ನಾನೆಂತು ಬಣ್ಣಿಸುವೆ ೨೨

ತನ್ನಡಿಗೆರಗಿದ ಧ್ರುವನ ಬಾಹುಗಳಿಂದ
ಲುನ್ನತ ಮೋಹದಿಂ ರಾಯ
ಚೆನ್ನಾಗಿ ಬಿಗಿಬಿಗಿದಪ್ಪಿ ಬಾಲನ ಶಿರ
ವನ್ನು ವಾಸನಿಸಿದನಾಗ ೨೩

ಬಂದ್ಯೆ ಮದ್ಭಾಗ್ಯಪಯೋಧಿಯೆ ಗೋವಿಂದ
ನಿಂದ ವರನ ಪಡೆದೀಗ
ಇಂದೆನ್ನ ಹೃದಯಪಂಕೇಜ ನಿನ್ನಾಸ್ಯಾರ್ಕ
ನಿಂದತಿಹರುಷ ನಾಳಿದುದು ೨೪

ಬಡತನವಡಸಿದೋರ್ವನು ದಾರಿಯೊಳಗೆ ತಾ
ನಡೆಯುತ ನಿಧಿಯ ರಾಸಿಯನು
ಎಡಹಿದನಂತೆ ತನ್ನಣುಗನ ಮುಖ ಕಂಡು
ಪೊಡವೀಶ ತಾಳಿದ ಮುದವ ೨೫

ಚಂದ್ರನ ಕಂಡ ಸಾಗರನಂತೆ ತನ್ನಯ
ಕಂದನ ಕಂಡವನೀಶ
ಬಂದ್ಯೆ ಮದ್ಭಾಗ್ಯಪರ್ವತವೆಯೆನ್ನುತ ಮತ್ತಾ
ನಂದದಿಂದಪ್ಪಿದನಾಗ ೨೬

ನೀನೆಯೋರ್ವನೆ ವನದಲ್ಲಿ ತಪಸಿ ಮತ್ತೆ
ಶ್ರೀನಿವಾಸನನೊಲಿಸಿದೆಯ್ಯ
ನಾನಾಲಿ[ಸುವೆ ನಿ]ನ್ನ ವಾಗಮೃತವ ಪೇಳ್ಯೆ
ನೀ ನಾರದರ ಕಂಡೆಯೆಂತು ೨೭

ಎನಲಿಂತು ರಾಯನು ಧ್ರುವನು ತಾ ವನದೊಳು
ವನಜಾಕ್ಷನನ್ನು ಧ್ಯಾನಿಸಿದ
ಘನಕಥೆಯನ್ನು ವರ್ಣಿಸಿದನಾನಂದದಿ
ತನಗೊರವಿತ್ತಂಥ ಪರಿಯ ೨೮

ತಂದೆಯೊಡನೆ ತನ್ನ ಪರಿಯನೆಲ್ಲವ ಪೇಳಿ
ಬಂದು ಮಾತೆಯ ಪದಗಳಿಗೆ
ವಂದಿಸಲಾಸುನೀತಿಯು ಪ್ರೆಯ ಮರೆದಳಾ
ನಂದದಿಂ ರೋಮಂಗಳುಬ್ಬಿ ೨೯

ತೋಳಂಗಳಿಂ ಬಿಗಿದಪ್ಪಿ ತನ್ನಯ ತೊಡೆ
ಮೇಲೆ ಕುಳ್ಳಿರಿಸಿ ಮುದ್ದಿಸುತ
ಬಾಲನ ನೆತ್ತಿಯ ವಾಸನಿಸುತಲಾಗ
ಲಾಲಿಸಿದಳು ಪ್ರಿಯೋಕ್ತಿಯಲಿ ೩೦

ಅನಿತರೊಳ್ ಸುರುಚಿಯಂಘ್ರಿಗೆ ವಂದಿಸಲು ಬಂದು
ವಿನಯದಿಂದತಿಪ್ರಿಯಃಗೂಡಿ
ತನಯ ನಿನ್ನನು ಕೂಡ್ಲೆ ಭಾಗ್ಯಬಪ್ಪುದಕಾ(?)ವು
ದನು ಮಾಡಿದೆವುಯೆಂದಳಾಗ ೩೧

ಬಾಲನ ಬಿಗಿಬಿಗಿದಪ್ಪಿ ಸುರುಚಿಯಂತಿ
ಲೀಲೆಯಿಂ ನುಡಿಸಿ ತೊಡೆಯೊಳು
ತಾಳುತ ಮುದವ ಕುಳ್ಳಿರಿಸಿಕೊಂಡಣುಗನ
ಬಾಲೆ ಮುದ್ದಿಸಿದಳೇವೇಳ್ವೆ ೩೨

ಸುರುಚಿಗೆರಗಿ ತನ್ನ ಮಾತೆಯೆಡೆಗೆ ಬಂದು
ಹರುಷದಿಂ ನುಡಿಯಲಾ ಧ್ರುವನು
ತರುಣಿ ಸುನೀತಿಯು ಪೋದ ಪ್ರಾಣವು ಬಂದ
ತೆರದಿ ಸಂತಸವ ತಾಳಿದಳು ೩೩

ತಂದೆಯೆನ್ನೊಳು ನುಡಿಯುಯ್ಯಾ ಮದ್ಭಾಗ್ಯವೆ
ಕಂದ ನಿನ್ನನು ವಾಸುದೇವ
ಎಂದು ಮನ್ನಿಸಿದಯೆಂತೊಲಿದ ನೀ ನೆನೆದೆಯೆಂ
ತೆಂದು ಪೇಳೆಂದು ಕೇಳಿದ[ಳು][1] ೩೪

ಎನ್ನೆಡೆಯಿಂದ ಪೋದವನೆಲ್ಲಿಗೈದಿದೆ
ಇನ್ನಾರ ಜೊತೆಯುನು ಸಾರ್ದೆ
ಮನ್ನಿಸುವರೆ ಹರಿಯೆಂತೊಲಿದನು ಪೇಳೈ
ಎನ್ನೊಡನೆನಲು ಪೇಳಿದನು ೩೫

ನಿನ್ನೊಡನಪ್ಪಣೆಗೊಂಡು ಪೋಗುತ ವನ
ವನ್ನು ಸೇರಿದೆನಲ್ಲಿ ಮತ್ತೆ
ಎನ್ನಿದಿರಿಗೆ ಮುನಿ ನಾರದರೈದಿಯೆ
ಎನ್ನ ಚಿಂತೆಗಳ ನೀಗಿದ[ರು][2] ೩೬

ಬೇಡವ್ವೆ ನಡೆ ಪುರಕೆಂದು ಎನ್ನನು ಬಹು
ಕಾಡಿದರಮ್ಮ ನಾರದರು
ಬೇಡಿಕೊಂಡೆನು ಒಲ್ಲೆನೆಂದವರೆನಗಾಗ
ಮಾಡಿದರುಪದೇಶವನ್ನು ೩೭

ನೀನನುಗ್ರಹಿಸಿದ ಮಂತವನೆ ಸಿದ್ಧವೆಂ
ದೀ ನಾರದರು ಪೇಳ್ದರೆನಗೆ
ಏನೆಂಬೆನದನೆದೆಯೊಳು ತಾಳಿ ಭಜಿಸಲು
ತಾನೊಲಿದನು ವಾಸುದೇವ ೩೮

ಎಂತು ಭಜಿಸಿದೆ ಯಾವಲ್ಲಿಯಿಂದ್ದೆಯೊ ಹರಿ
ಯೆಂತು ಒಲಿದು ವರವಿತ್ತ
ಎಂತು ತಾಳಿದೆ ಹಸಿವಾಗೆ ಬಾಯಾರಲ
ದೆಂತು ಜೀವಿಸಿದೆಯೊ ಕಂದ ೩೯

---

1 ಸು 2 ಸು

ಕೇಳಮ್ಮ ನಿನ್ನಡಿಗೆರಗಿ ನಾ ನಡೆಯುವ
ಕಾಲದಿ ನಾರದರೈದಿ
ಲೀಲೆಯಿಂದುಪದೇಶಗೈಯಲಾನಂದದಿಂ
ಮೇಲಾದ ವನದೊಳೈದಿದೆನು ೪೦

ಪರಿ ಪರಿ ವೃಕ್ಷಲತೆಯು ಮೃಗಗೂಡಿದ
ವರಮಧುವನದೆಡೆಗೈದಿ
ಹರಿವ ಕಾಳಿಂದಿಯೊಳ್ ಮಿಂದು ಶ್ರೀಕೃಷ್ಣನ
ಸ್ಮರಿಸಿದೆನೇಕಚಿತ್ತದಲಿ ೪೧

ಮೊದಲ ತಿಂಗಳೊಳ್ಮೂರು ದಿನಕೊಮ್ಮೆ ಮೆದ್ದೆನು
ಬದರೀ ಫಲವನು ನಾನು
ಒದಗಿದೆರಡನೆ ತಿಂಗಳೊಳಾರು ದಿನಕೊಮ್ಮೆ
ಉದುರಿದೆಲೆಯ ಮೆದ್ದೆನಮ್ಮ ೪೨

ಮೂರನೆ ತಿಂಗಳೊಳೊಂಬತ್ತು ದಿನಕೊಮ್ಮೆ
ನೀರನೆ ಪಾನವ ಮಾಡ್ದೆ
ಈರಾರು ದಿನಕೊಮ್ಮೆ ನಾಲ್ಕನೆ ತಿಂಗಳೊಳ್
ಆರಿತು ಕ್ಷುದ್ವಾಯುವುಂಡು ೪೩

ಐದನೆ ತಿಂಗಳು ಬರಲು ಶ್ವಾಸವ ನಾನು
ಭೇದಿಸಿ ಸೆಳೆದು ಶ್ರೀಹರಿಯ
ಪಾದವ ನೆನೆದೆನಾನಂದದಿಂ ಹರಿಯಿಂದಿ
ರಾದನೆನಗೆ ಕೇಳೆ ಜನನಿ ೪೪

ವಾಸುದೇವನು ತಾನೆ ಬಂದೆನ್ನ ಬಿಗಿದಪ್ಪಿ
ಸೂಸುವೆನ್ನಂಬಕ ಜಲವ
ತಾ ಸೆರಗಿನಿಂದಲೊತ್ತುತಲೆನ್ನ ನೆತ್ತಿಯ
ವಾಸನಿಸಿದನು ಕೇಳಮ್ಮ ೪೫

ತರುಣ ನೀ ಬಳಲಿದೆಯ ಎನ್ನುತಮೃತವೆ
ಸುರಿವಂಥ ಮಾತನಾಡುತ್ತ
ಹರಿಯೆನ್ನ ಗಲ್ಲದೊಳ್ ತನ್ನಯ ಶಂಖವ
ಕರುಣದಿಂದೊತ್ತಿದನಮ್ಮ ೪೬

ಆಗಲನಂತ ಮಹಿಮನ ನಾ ಸ್ತುತಿಸಿದೆ
ಯೋಗಿವಂದ್ಯನೆ ಸಲಹೆಂದು
ಆ ಗುಣನಿಧಿ ಸರ್ವಲೋಕಕತ್ಯಧಿಕ ತಾ
ನಾಗಿಹ ಪದವಿತ್ತೆನೆಂದ ೪೭

ಒಲ್ಲೆನನ್ಯವ ನಿನ್ನ ಪಾದಸೇವೆಯ ಮಾತ್ರ
ಉಲ್ಲಾಸದಿಂ ಮಾಡುವಂತೆ
ನಿಲ್ಲದೊಲಿದು ಪಾಲಿಸೆಂದಡೆ ಶ್ರೀಹರಿ
ತಲ್ಲಣಿಸದಿರಿತ್ತೆನೆಂದ ೪೮

ಈ ರಾಜ್ಯವಂ ಧರ್ಮಗೂಡಿ ನೀನಾಳಿಪ್ಪ
ತ್ತಾರು ಸಾವಿರ ವರುಷಗಳು
ತೀರುವ ಪರಿಯಂತ್ಯವೆಂದು ಶ್ರೀಹರಿ ಕೃಪೆ
ದೋರಿ ಪೇಳಿದ ನೀ ಕೇಳಮ್ಮ ೪೯

ಆಮೇಲೆ ಸರ್ವತಾರಾರ್ಕೇಂದುಗಳಿಗೆಲ್ಲ
ತಾ ಮೊದಲಾಧಾರವಾದ
ಶ್ರೀಮದ್ಭಕ್ತರು ಕೂಡಿದಾಲೋಕಕ್ಕೈದೆಂದು
ನೇಮಿಸಿದನು ವಾಸುದೇವ ೫೦

ಅನಿತರೊಳಂತರ್ಧಾನವ ಹರಿ ಸೇರಿದ
ನೆನಗೆ ತೋರದೆಯುದರಿಂದ
ಜನನಿ ಕೇಳಿಲ್ಲಿಗಾನೈದಿದೆ ನಿನ್ನಡಿ
ವನಜವ ಕಂಡೆ ಸಂತಸದಿ ೫೧

ಎಂದಿಂತು ಧ್ರುವನು ಪೇಳಲು ಸುನೀತಿಯು ತಾನು
ಕಂದನ ಬಿಗಿಬಿಗಿದಪ್ಪಿ
ಇಂದಾನು ಪೂರ್ವದೊಳೆಸಗಿದ ಸುಕೃತವು
ಬಂದುಂದಂಗೈಗೆಂದಳಾಗ ೫೨

ಉತ್ತಮನ್ಯೆದಿ ತನ್ನಡಿಗೆರಗಲು ಧ್ರುವ
ನತ್ಯಂತ ಸಂತೋಷದಿಂದ
ಇತ್ತ ಬಾರೆಂದು ತೋಳುಗಳಿಂದ ಬಿಗಿದಪ್ಪಿ
ಮತ್ತೆ ಕೇಳಿದ ಕ್ಷೇಮವನ್ನು ೫೩

ಪುರಜನರೆಲ್ಲರಾನಂದ ಸಾಗರದೊಳ
ಗುರೆ ಮುಳುಗಿದರಾಗಿ ಧ್ರುವನ
ಪರಿಪರಿಯಿಂ ಸ್ತುತಿಗೈಯುತ ಕ್ಷೇಮವ
ನಿರದೆ ಕೇಳಿದರು ಸಂತಸದಿ ೫೪

ತರುಣಿಯರೊಳು ಸುನೀತಿಯೆ ಭಾಗ್ಯವಂತೆಯು
ನೆರೆ ಮೃತ್ಯುಮುಖದ ಕಾನನಕೆ
ತೆರಳಿದಣುಗನನ್ನು ಮರಳಿ ಕಂಡಳು ಹರಿ
ಗರುಣವೆಂತೊಯೆಂದರೆಲ್ಲ ೫೫

ಇಂತೆಂದು ಧ್ರುವನ ಕೊಂಡಾಡುತ ಸಂತೋಷ
ದಿಂ ತುಂಬಿಕೊಂಡಿರೆ ಸೇನೆ
ಅಂತವಿಲ್ಲದೆ ನಾನಾವಿಧವಾದ ವಾದ್ಯಗ
ಳಂ ತಾಡಿಸಿದ್ಧರು ಘೋರೆನುತ ೫೬

ಭೇರಿ ಮದ್ದಳೆ ಡೋಳು ಕೊಳಲು ಕೊಂಬುಗಳು ನಾ
ನಾ ರೀತಿಯಾದ ವಾದ್ಯಗಳು
ಘೋರೆಂದು ಮೊಳಗಿದವಾ ಧ್ರುವನನು ಗಜ
ವೇರಿಪ ಶುಭಸಮಯದಲಿ ೫೭

ಮುತ್ತು ರತ್ನಗಳಿಂದ ಕೂಡಿದ ಹೊದಿಕೆಯು
ನೊತ್ತಾಗಿಯುದರ ಬೆನ್ನಿಂದ
ಸುತ್ತ ಜೋಲಿಡುವಂತೆ ಹೊದಿಸಿರೆಯಾಗಲಾ
ಮತ್ತೇಭ ಬಂದುದುತ್ಸವದಿ ೫೮

ಪರಿಪರಿ ಭೂಷಣ ವಸನಗಳಿಂದಲಾ
ಕರಿಯು ಶೃಂಗರಿಸಿಯೆ ನಿಲಿಸಿ
ತರುಣ ಧ್ರುವನ ಮುದದಿಂದಾನೆ ಮೇಲೆ ಕು
ಳ್ಳಿರಿಸಿ ನಡೆಸಿದರು ಪುರಕೆ ೫೯

ತುರಗಗಳಮಿತ ಮುಂಗಾಲ್ನೆಗಹುತ ಮುಂದೆ
ಧರಧರದಿಂದ ಸಾಗುತ್ತ
ಬರುವ ಪರಿಮಿತ ಸ್ಯಂದನಗಳ ಲೆಕ್ಕಿಪ
ರರಿದಹಿನಾಥಗಾದಡೆಯು ೬೦

ದೊರೆಯು ನೇಮಿಸಿದ ರೀತಿಯೊಳತಿ ಸುಂದರ
ಕರಸುಯೆಂಬಂದದಿ ಪುರವ
ಹರುಷದಿಂ ಶೃಂಗಾರಗೊಳಿಸಿದರದರತಿ
ಸಿರಿಯುನೇನೆಂತು ಬಣ್ಣಿಸುವೆ ೬೧

ಪರಿಪರಿ ತೋರಣ ಮೇಲ್ಕಟ್ಟು ಶುಭದ ಚ
ಪ್ಪರ ಮಂಟಪಂಗಳಲ್ಲಲ್ಲಿ
ವಿರಚಿಸಿ ಪೂರ್ಣಕುಂಭಗಳು ಫಲಗಳಿರಿ
ಸಿರುವ ಬೀದಿಯೊಳ್ಬಂದರಾಗ ೬೨

ಮನೆ ಮನೆ ಬಾಗಿಲೊಳಿಕ್ಷುದಂಡಗಳನು
ಗೊನೆಯು ಬಾಳೆಯು ಕಂಬಗಳನು
ಅನುಪಮ ಫಲಕುಸುಮಂಗಳನಿರಿಸಿಪ್ಪು
ದನು ನೋಡುತ್ತೈತಂದರಾಗ ೬೩

ಲಾಲಿಸಿದಳು ಪ್ರಿಯೋಕ್ತಿಯಲಿ 

ಬಿರುದನುಚ್ಚರಿಪ ಪಾಠಕರೆಡಬಲದಲಿ
ಬರುತಿರ್ದರತಿ ಮುದದಿಂದ
ಕರಿಯೇರಿ ಧ್ರುವ ಬಪ್ಪ ಸಿರಿಯನುಚ್ಚರಿಸುವ
ಡರಿದಾಯಿತಾ ಶೇಷಪತಿಗೆ ೬೪

ಮುಂದೆ ನಾನಾದೇಶ ದೊರೆಗಳೈದುತ ಮತ್ತೆ
ವಂದಿಗಳುಗ್ಘಡಿಸುತ್ತ
ಸಂದುಬಿಡದೆ ಬೀದಿಯೊಳು ಮಂದಿ ಬಪ್ಪಂಥ
ಚಂದವನೆಂತು ಬಣ್ಣಿಸುವೆ ೬೫

ಎಡಬಲದಲಿ ಚಾಮರಗಳಾಡುತ ಮುಂದೆ
ಬಿಡದೆ ಪಾಠಕರು ಪಾಡುತ್ತ
ಎಡೆಯೊಳೂಳಿಗಜನ ಬರುತ ಧ್ರುವನು ಬಪ್ಪ
ಸಡಗರವನ್ನೇವೇಳುವೆನು ೬೬

ನಾನಾಪರಿಯ ಜಾತಿಯಿಪ್ಪ ಕೇರಿಯೊಳಗೆ
ಭೂನಾಥ ತನ್ನಣುಗನನು
ಆನೆಯನೇರಿಸಿಕೊಂಡರಮನೆಯೆಡೆ
ಗಾನಂದದಿಂ ಕರೆತಂದ ೬೭

ಕರವ ಕೊಟ್ಟೋಳಿಗ ಜನವನೆ ಮೇಲಣಿಂ
ಧರೆಗಿಳಿಯಿಸಿ ಪರಾಕೆಂದು
ಒರೆಯುತ ಹಸ್ತಗೊಟ್ಟೋಳಯಿಂಕೆ ಕರೆದೊಯ್ದ
ಪರಿಯ ನಾನೆಂತು ಬಣ್ಣಿಸುವೆ ೬೮

ವರರತ್ನಖಚಿತ ಸಿಂಹಾಸನಾಗ್ರದೊಳು ಕು
ಳ್ಳಿರಿಸಿ ರಾಯನು ಧ್ರುವನನ್ನು
ಹರುಷದಿಂ ನೋಡಿಯಾನಂದ ಕ್ಷೀರಾಬ್ಧಿಯೊ
ಳುರೆಯಾಳುತಿಹನಡಿಗಡಿಗೆ ೬೯

[ಓ][1]ಲಗ ಜನ ತಮ್ಮ ತಮ್ಮ ನಿಳಯಂಗಳ್ಗೆ
ಲೀಲೆಯಿಂದೈದಲಾ ಧ್ರುವನ
ಮೇಲಾಗಿ ಭೋಜನಗೈಸಿದಳಾನಂದ
ಲೋಲೆ ಸುನೀತಿ ಸಂತಸದಿ ೭೦

ಪರಿ ಪರಿ ಭಕ್ಷ್ಯಭೋಜ್ಯಗಳನು ಚಿನ್ನದ
ಹರಿವಾಣದೊಳಗೆ ತಾ ಬಡಿಸಿ
ಎರೆದು ಗೋಘೃತ ಕ್ಷೀರಗಳನು ಸುನೀತಿಯಾ
ದರಿಸಿದಳಾತ್ಮಸಂಭವನ ೭೧

ಕರದೊಳೆವ್ವದಕೆ ಪನ್ನೀರನಿತ್ತಾನಂದ
ವೆರಸಿ ಕರ್ಪುರ ವೀಳಯವನು
ತರುಣನಿಗಿತ್ತು ತಾ ಪೊಸತಾಗಿ ಬಾಲನ
ನೆರೆ ಪಡೆದಂತೆ ಹಿಗ್ಗಿದಳು ೭೨

ಜನನಿಯಾದರಿಸಲಾಮೇಲೆ ಧ್ರುವನು ತಾನು
ಕನಕದ ಪರ್ಯಂಕದಲ್ಲಿ
ಅನುವಾದ ಹಾಸಿಕೆಯೊಳವಡಿಸಿರೆ ನಿದ್ರೆ
ಯನು ತಾಳಿ ತಾ ಪವಡಿಸಿದ ೭೩

ಸುಖನಿದ್ರೆಗೈದು ತಾನೆದ್ದು ಭಾಸ್ಕರನುದ
ಯಕ್ಕೆ ಜಾವವಿದ್ದ ಕಾಲದಲಿ
ಅಕಳಂಕಮಹಿಮ ಶ್ರೀವಾಸುದೇವನ ಚರ
ಣಕೆ ನಮಿಸಿದ ಭಕ್ತಿಯಿಂದ ೭೪

ಸ್ಮರಿಸಿ ಶ್ರೀವಾಸುದೇವನ ತಾನು ಪೂರ್ವದಿ
ಬರಲರ್ಕ ತಮವ ನೀಗುತ್ತ
ಹರುಷದಿಂ ಮಿಂದರ್ಘ್ಯವಿತ್ತು ನಮಿಸಿದಂಥ
ಸಿರಿಯನೇನೆಂದು ಬಣ್ಣಿಸುವೆ ೭೫

1 ವಾ

ಪರಿಪರಿಯಿಂದೊಳಗ ಜನರೈದಲಾನಂದ
ವೆರಸಿಯಹಾಸ್ಥಾನದಿ ರಾಜ
ಇರಲಲ್ಲಿಗಾಧ್ರುವನೈದಿ ಸಮೀಪದಿ
ಹರುಷದಿಂ ಕುಳಿತನೇವೇಳ್ವೆ ೭೬

ನಿರುತವೀ ಧ್ರುವನ ಚರಿತೆಯನು ಭಕ್ತಿಯಿಂ
ಬರೆದೋದಿ ಕೇಳಿದ ಜನರ
ವರಚಿಕ್ಕನಾಗಪುರದ ವೆಂಕಟೇಶನು
ಪೊರೆವನು ಸುಖವಿತ್ತು ದಯದಿ ೭೭

# ಮೊರೆದೆದ್ದನಾ ಧ್ರುವ

ಕೇಳೆಲೆ ರಾಜ ಉತ್ತಾನಪಾದಾಖ್ಯ ಭೂ
ಪಾಲಕ ತನ್ನಣುಗನಿಗೆ
ಲೀಲೆಯಿಂದಲಿ ಮದುವೆಯ ಮಾಡಿ ರಾಜ್ಯವ
ಪಾಲಿಸಿದನು ಧರ್ಮಗೂಡಿ ೧

ಉತ್ತಾನಪದರಾಯನಣುಗನೈದಿದನೆಂದು
ಸುತ್ತಣದೇಶದೊಲ್ಲಭರು
ಅತ್ಯಂತ ಹರುಷದಿಂ ಬಂದು ಕಾಣಿಕೆಗಳ
ನಿತ್ತು ಕಂಡರು ರಾಯನನ್ನು ೨

ಕಂಡು ರಾಯನ ಧ್ರುವನನ್ನು ಸರ್ವರು ಮುದ
ಗೊಂಡು ತಮ್ಮಯ ರಾಜ್ಯಗಳಿಗೆ
ತಂಡ ತಂಡದಿ ಸಾಗಿ ಪೋದರವರ ಲೆಕ್ಕ
ಗಂಡು ವರ್ಣಿಸುವರೆನ್ನಳವೆ ೩

ಈ ಪರಿ ಸಂತೋಷದಿಂದಲಾ ರಾಯನು
ತಾ ಪೊಡವಿಯ ಪಾಲಿಸುತ್ತ
ಶ್ರೀಪತಿಯಂಘ್ರಿ ಪೂಜೆಯ ಮಾಡುತಿದ್ದನ
ದೇಪೇಳ್ವೆನಾ ಚಕ್ರಿಯನ್ನು ೪

ತರುಣ ಧ್ರುವನಿಗೆ ಯೌವನದೋರಲಾರಾಯ
ವರಶಿಂಶುರಾಯ ಪುತ್ರಿಯನು
ಹೆರುಷದಿ ಭ್ರಮೀಯೆಂಬಳನ್ನು ಮದುವೆಯ ಮಾ
ಡಿದುರುತರೋತ್ಸವವನೇವೇಳ್ವೆ ೫

ಉತ್ತಾನಪದರಾಯ ರಾಜ್ಯಭಾರವ ತನ್ನ
ಪುತ್ರನಿಗಿತ್ತು ಶ್ರೀಹರಿಯ
ಚಿತ್ತದಿ ನೆನೆಯುತ್ತೈದಿದ ವನವಾಸಕ್ಕೆ
[ಸತ್ಯ]ಸಂಧನು ಮುದದಿಂದ ೬

ಪರಿಪರಿಭೋಗವನುಣುತಲಾ ಧ್ರುವನಿರ
ತಿರಲಾಗುಲುತ್ತಮ ತಾನು
ನೆರೆಮೃಗಯಾತ್ರೆಗೆ ಪೋಗಿ ಯಕ್ಷನ ಕೈಯ
ಮರಣವ ಪಡೆದನೇನೆಂಬೆ ೭

ತರುಣನರಸಿಕೊಂಡೈದಿ ಸುರುಚಿಯು ಕಂ
ಡುರಿಯೊಳು ಬೆಂದುಪೋಗಲ್ಕೆ
ಮೊರೆದೆದ್ದನಾಧ್ರುವ ಧನದನ ರಾಜ್ಯವ
ನುರುಹುವೆನೆಂದು ಕೋಪದಲಿ ೮

ಕರೆಸಿಯಾಕ್ಷಣಮಂತ್ರಿಗಾಜ್ಞಾಪಿಸಿದ ಬೇಗ
ಬರಿಸು ಸೇನೆಯನು ನೀನೆಂದು
ಮೊರೆಯುತ ಕಾಲಭೈರವನಂತೆ ಧ್ರುವ ತಾನು
ಹೊರಡಲೆತ್ನವನು ಮಾಡಿದನು ೯

ಜೋಡಿಸಿದವು ಹಯರಥಗಳು ಗಜಸೇನೆ
ಯಾಡಿದವಂದಳಸ್ತೋಮ (?)
ಕೂಡಿದಾಕ್ಷಣ ಪಾದಚಾರಿಗಳಾಯುಧ
ಗೂಡಿಯಾಪುರಮಧ್ಯದಲಿ ೧೦

[ತರಣಿ][1]ತಾ ಧ್ರುವನ ಕೋಪವ ಕಂಡು ಎನ್ನನ್ನು
ಬರಿದೆ ಬಿಡುವನಲ್ಲೆಂದು
ತ್ವರಿತವಾಗಿಯೆ ಪಶ್ಚಿಮಾಬ್ಧಿಯ ಸರಿಸದೊ
ಳಿರದಾಗ ಮರೆಯಾದ ಬೇ[ಗ] ೧೧

ಧ್ರುವನು ಕೌಬೇರದಿಕ್ಕಿಗೆ ದಂಡುಸಹಪೋಗಿ
ಯುವನ ಶಿಕ್ಷಿಪೆನೆಂಬ ಕೋಪ
ತವಕಿಸುತಿರಲಾಗ ರಾತ್ರಿಯೆ ಯುಗವೆಂಬೊ
ಲವನೀಶ ನಿರ್ನಿದ್ರನಾದ ೧೨

ತರುಣಿಯು ಧ್ರುವ ನನ್ನನೇನೆಂಬನೋಯೆಂದು
ತ್ವರಿತದಿ ಮೂಡದಿಕ್ಕಿನಲಿ
ಅರಸು ಯುದ್ಧಕ್ಕೆ ಪೋಪನೆಂದು ತಾನೈ[ದಿ][2]
ಹರುಷದಿಂದರ್ಘ್ಯವ ಕೊಂಡ ೧೩

ತರಣಿಗರ್ಘ್ಯವನಿತ್ತು ವಾಸುದೇವನ ಪಾದ
ಸರಸಿಜಪೂಜೆಯ ಮಾಡಿ
ತ್ವರಿತದಿ[ಂ]ದಾಸ್ಥಾನಕೈದಿ ಓಲಗವಿತ್ತ
ಪರಿಯನೇನೆಂತು ಬಣ್ಣಿಸುವೆ ೧೪

ಸೀಸಕ ಕವಚ ಸಿಂಗಾಡಿಗಳನು ತಾಳಿ
ಭೂಷಿಸಿ ಸರ್ವಾಂಗವನ್ನು
ಐಸೆಮತ್ತೆಯೂಳಿಗವ ಬೆಸಸೆಂದು ಶ
ರಾಸನಧರರು ಕೇಳಿದರು ೧೫

ತುರಗ ಸಿಂಗರಿಸಿದವಾಯುಧವೆಮ್ಮಯ
ಕರಗಳಿಗಳವಟ್ಟುದೀಗ
ಕರುಣಿಪುದೆಮಗೂಳಿಗವನೆಂದು ರಾವುತ
ರ್ದೊರೆಯಾದ ಧ್ರುವನ ಕೇಳಿದರು ೧೬

---

1 ತರುಣಿ 2 ದಿಯೆ

ಬಿನ್ನಪವಿದನು ಲಾಲಿಸು ಜೀಯ ಮತ್ತೇಭ
ಚೆನ್ನಾಗಿ ಶೃಂಗಾರವಾಗಿ
ಉನ್ನತವಾದಪರಮಿತ ಬಂದವು ಕಾರ್ಯ
ವನ್ನು ಪೇಳೆಂದವರ್ಗಾವುತರು ೧೭

ಕಲಶ ಛತ್ರವು ಧ್ವಜ ಶೃಂಗಾರವಾದಂಥ
ಚೆಲುವಾದ ರಥಗಳು ಜೀಯ
ಬಲು ಶಕ್ತಿಕುದುರೆ ಕೂಡಿವೆಯೊಳಿಗವ ಬೆಸ
ಸಲಿ ಬೇಕೆಂದರು ಮಹಾರಥರು ೧೮

ಸುರಗಿ ಭಲ್ಲೆಯು ಕೊಂತ ಸಿಂಗಾಡಿ ಶೂಲ ಮು
ದ್ಗರ ಶರ ಖಡ್ಗ ಬಿಲ್ಗೂಡಿ
ದೊರೆಯಿದಿರೊಳು ನಿಂದು ಕಾಲಾಳ್ಗಳೊಳಿಗ
ದಿರವ ಕೇಳಿದರು ಗುಂಪಾಗಿ ೧೯

ಅನಿತರೊಳಾರೋಗಣೆಗೆ ಪೋಗಿ ಹರಿಪಾದ
ವನಜಪೂಜೆಯನುರೆ ತೀರ್ಚಿ
ಕನಕಪಾತ್ರೆಯೊಳುಣಬಡಿಸಲು ಕಾಂತೆಯು
ರನುವಾಗಿ ಧ್ರುವನು ಭುಂಜಿಸಿದ ೨೦

ಭೋಜನಗೈದು ವೀಳೆಯಗೊಂಡು ಹರುಷದಿಂ
ರಾಜನಾಸ್ಥಾನಕ್ಕೆತರಲು
ರಾಜಿಪಭೂಷಣಾಯುಧದಾಳ ಬಲವದು
ಫೌಜಾಗಿ ಬಂದುದೇಪೇಳ್ವೆ ೨೧

ದೊರೆಯಿದೊ ಯುದ್ಧಕ್ಕೈದುವನೆಂದು ಭೇರಿಯ
ನಿರದೆ ತಾಡಿಸಿದನುತ್ಸವದಿ
ಗಿರಿ ನಡುಗಿದವವನಿಯು ಪೂತ್ತು ಶೇಷ ಬೆ
ದರಿದನೇನೆಂದು ಬಣ್ಣಿಸುವೆ ೨೨

ಧರಣಿದೇವಿಯು ಧ್ರುವನಿಗೆ ಬಹು ಬೆದರಿಯಾ
ಪರಿಯ ಸೇನೆಯನೆಲ್ಲ ತಾನು
ನೆರೆಯಾದಳೆಂಬಂತೆ ತೋರ್ದುದಾ ಸೇನೆಯು
ಪರಿಯನಾವನು ಗಣ್ಣಿಪನು ೨೩

ಕರಿಗಳ ಶಿರದಿಂದ ಜೋಲುವ ಮದಜಲ
ಧರಣಿಯೊಳ್ ನದಿಯ ರೀತಿಯಲಿ
ಪರಿದುದಾನೆಗಳ ಲೆಕ್ಕವ ಮಾಳ್ಪುದೆಂತು ಭೂ
ಧರಗಳಂತಿರ್ದವೇವೇಳ್ವೆ ೨೪

ತುರಗಗಳೋಡಿ ಪೋಗುವ ಪಾದ ಘಲ್ಲಣೆ
ಗಿರದೆ ಭೂಮಿಯು ಒಡೆದಾಗ
ಕರಿ ಮದೋದಕಗೂಡಿ ಕೆಸರಾದುದಾಧ್ರುವ
ನರಪತಿ ಸೇನೆಯೊಳೆಲ್ಲ ೨೫

ಕರಿರಥ ತುರಗ ಪಾಯ್ದಳಗಳ ಭಾರಕೆ
ಧರಣಿ ಹೊತ್ತಿಹ ಶೇಷಪತಿಯು
ಶಿರಗಳು ಬಾಗಿದವಷ್ಟದಿಗ್ಗಜಗಳು
ಒರಲಿದವು ಮುಖವಾಗಿ ೨೬

ಸೇನೆಯು ನೆರಹಿದ ಪರಿಯು ನೋಡುತ ಊರೊ
ಳಾನಂದದಿಂದ ಬಾಲೆಯರು
ಏನೆಂಬೆ ಸೌಧ ಸೌಧಗಳೊಳು ಕುಳಿತು ತಾವ್
ಸಾನುರಾಗದಿ ನೋಳ್ಪ ಸಿರಿಯು ೨೭

ನಗರದಿಂ ಪೊರಮಟ್ಟು ಮುಂದಣ ವನದೊಳ
ಗಗಣಿತ ಸೇನೆಯುಸಹಿತ
ಸೊಗಸಾಗಿ ನಿಂದರುದಯವಾಗಲರ್ಕನು
ಮಿಗೆ ಪೋಪ ನಾಳೆಯೆಂದೆನುತ ೨೮

ಹಿಂಮುಳಿದವರನೀ ಧ್ರುವನು ಶಿಕ್ಷಿಸದಿರ
ನೆಂದು ಸರ್ವರು ಬರಲೆನುತ
ಚಂದದಿಂ ಸೂರ್ಯನವರೊಳತಿ ದಯಗೂಡಿ
ನಿಂದ ಪಡುವ ಮರೆಯಾಗಿ ೨೯

ಸೇನೆಯೆಲ್ಲವು ಬಂದು ವನದೊಳು ಹರುಷಗೂ
ಡಾನಂದದಿಂದಲಾ ರಾತ್ರಿ
ತಾನೈದಲಿಂದು ನೋಡುವೆನೆಂದರ್ಕನು ಬಂದ
ನೇನೆಂಬೆನತಿಕಾಂತಿಗೂಡಿ ೩೦

ನಿರುತವೀ ಧ್ರುವನ ಚರಿತೆಯನು ಭಕ್ತಿಯಿಂ
ಬರೆದೋದಿ ಕೇಳಿದ ಜನರ
ವರಚಿಕ್ಕನಾಗಪುರದ ವೆಂಕಟೇಶನು
ಪೊರೆವನು ಸುಖವಿತ್ತು ದಯಂದಿ ೩೧

# ಸಾಗಿ ಬಂದುದು ಬಲ

ಕೇಳಿಲೆ ರಾಜ ಧ್ರುವನು ಯುದ್ಧಕೈದುವ
ಶೀಲವ ನೋಳ್ಪೆ ತಾನೆಂದು
ಲೀಲೆಯಿಂದಿನನು ಪೂರ್ವಾಚಲ ಶೃಂಗದ
ಮೇಲೆ ಮಂಡಿಸಿದ ಸಂತಸದಿ ೧

ಹರುಷದಿ ಧ್ರುವನೆದ್ದು ಮಿಂದು ಮಡಿಯನುಟ್ಟು
ಧರಿಸಿ ಮತ್ತೂರ್ಧ್ವಪುಂಡ್ರವನು
ನೆರೆ ನಿತ್ಯಸಂಧ್ಯಾಕರ್ಮಗಳ ವಿರಚಿಸಿ
ತರಣಿಗರ್ಘ್ಯವನಿತ್ತನಾಗ ೨

ವಂದಿಸಿ ಸೂರ್ಯಂಗೆ ಕುಳಿತು ಪೀಠದಿ ತನ
ಗಂದದಿ ನಾರದ ಮುನಿಯು
ಅಂದುಪದೇಶಿಸಿದಂಥ ಮಾರ್ಗದಿ ಹರಿ
ಯ ಧ್ಯಾನಗೈದನು ಮುದದಿ ೩

ಪುನರಪಿ ವಾಸುದೇವನಿಗೆರಗಿಯೆ ಮತ್ತೆ
ಯನುವಾದ ಭೂಷಣವಿಟ್ಟು
ಅನುಪಮ ಸೇನೆ ಮುಂದಕೆ ನಡೆಯಲಿಯೆಂದು
ವಿನಯದ ಮಂತ್ರಿ ಪೇಳಿದನು ೪

ಪೊಯ್ಸಿದನಾಗ ಡಂಗುರವನು ರಾಜೇಂದ್ರ
ನೀ ಸುಮುಹೂರ್ತದಿ ಸೇನೆ
ತಾ ಸಾಗಲೆಂದು ನಿರೂಪಿಸಿದನು ಎಂಬ
ಘೋಷ ತುಂಬಿದುದು ದಂಡಿನೊಳು ೫

ಕೇಳಿ ಡಂಗು[ರ][1]ನಾದವಾ ಸೇನೆ ಶೀಘ್ರದಿ
ಲೀಲೆಯಿಂ ತಂತಮ್ಮಾಯುಧವ
ತಾಳಿ ತುರಗ ಗಜ ರಥವೇರಿ ನಡೆದುಂದು
ಕಾಲಾಳುಂ ಸಹ ಥರ ಥರದಿ ೬

ಅರಸನಾನೆಯಂ ಮೇಲೆ ಕುಳಿತು ತನ್ನುಭಯದಿ
ಬರುವ ಮಂತ್ರಿ ಪ್ರಧಾನಿಗಳ
ಹರುಷದಿಂ ಮಾತನಾಡಿಸುತ ಮುಂದಣ ಕಾರ್ಯ
ಕರಗತವಪ್ಪಂತೆ ಬಂದ ೭

ಗಗನವ ತುಂಬಿ ಸೂರ್ಯನ ಕಾಂತಿ ಕಾಣದೊಲ್
ಮಿಗೆ ಸೇನೆ ನಡೆದ ಕೆಂದೂಳಿ
ಮೊಗಗಾಣದಂತೆ ಮುಚ್ಚಿದುದಂ ನೋಡಲು ಮತ್ತೆ
ಹಗಲಿರುಳೆಂಬಂತೊಪ್ಪಿದುದಂ ೮

ಧರಣಿದೇವಿಯು ತನಗಾಕಾಶ ಮಾಡ್ದುಪ
ಚರಣೆಯಂ ನೆನೆದು ತಾ ಮರಳಿ
ಪರುಷಗೊಡುವಳೊ ಮೇಲಕೆ ಎಂಬ ತೆರದಲಿ
ಚರಣಗಳ್ ದೂಳಡರಿದುದಂ ೯

ಸುರಲೋಕದಂತೆ ರಾಮನ ಸೇನೆಯೊಲಂ ಪಾಂಡ
ವರ ಹಾಗೆ ವೈಭವಮಾಗಿ
ಕರಿ ಹರಿ ನರರಿಂದಲೊಪ್ಪಿತಾ ಧ್ರುವನ ದಂ
ಡುರೆ ನೋಳ್ಪರಿಂಗತಿಶಯದಿ ೧೦

---

1 ರಥ

ಗಿರಿವನನದಿಗಳನುತ್ತರಿಸುತ ಕರಿ
ತುರಗ ರಥಗಳು ಕಾಲಾಳು
ಥರಥರವಾಗಿ ಸಾಗುವ ಸಿರಿಯಿರವನು
ಒರೆವಂಥ ಕವಿ ಯಾರು ಜಗದಿ ೧೧

ಅತ್ತಲಾ ಧನದನ ಪುರದೊಳು ಧ್ರುವನು ದಂ
ಡೆತ್ತಿ ಬರುವನೆಂದು ಚರರು
ವಂತ್ತೆ ತಾವೈದಿ ಕುಬೇರಗೆ ಪೇಳಿದ
ರೊತ್ತಿ ಸನಿಯಕೈದಿತೆಂದು ೧೨

ದೇವ ಬಿನ್ನಹ ಧ್ರುವ ನಿನ್ನ ಮೇಲಣ ಕೋಪ
ತೀವಿ ತಾ ದಂಡೆತ್ತಿ ಬಂದ
ಸಾವಧಾನವ ಮಾಡಲಾಗದು ನೋಡಲಿ
ತಾವಾ ಶಕ್ತ ಸೇನೆಯನು ೧೩

ಊರ ಮುಂದಣ ವನದೆಡೆಗೆ ಬಂದಿದೆ ದಂಡು
ತೋರದು ಗಣನೆ ಲೆಕ್ಕಿಪಡೆ
ಭೈರವನಂತೆ ಕೋಪಾಟೋಪನಾಗಿಹ
ವೀರನಾಗಿಹ ಧ್ರುವ ತಾನು ೧೪

ಹಿಂದೆಮ್ಮ ದೇಶಕೀತನ ತಮ್ಮ ತಾ ಬೇಂಟೆ
ಗೆಂದು ಬಂವಡೆ ಯಕ್ಷನೋರ್ವ
ಕೊಂದನು ಗಡ ಮತ್ತಾತನ ಮಾತೆಯುರಸಲ್ಕೆ
ತಂದುರಿಯೊಳು ಪೋದಳಂತೆ ೧೫

ಇದರಿಂದಲತಿ ಕೋಪಮುಂ ತಾಳಿ ಧ್ರುವ ನಿನ್ನ
ಮುದವ ಕೊಲ್ಲುವೆನೆಂದು ತಾನು
ಒದಗಿ ದಂಡೆತ್ತಿ ಬಂದನು ಗಡ ನೀ ತಡೆ
ಯದೆ ಬೇಗ ಬೆಸಸೂಳಿಗವನು ೧೬

ಇವನ ಲೆಕ್ಕಿವೆಪೆ ಏತಕೆ ಎಂದಡಚ್ಯುತ
ನಿವನಿಗೆ ಬಲಿದಿಹನದರಿಂ
ಶಿವ ಸಖ ಕೇಳ್ ನೀನಪ್ಪಣೆಗೊಡು ನಮ್ಮ ಯು
ದ್ಧವನು ನೋಡೆಂದರಾ ಚರರು ೧೭

ಕೇಳಿ ದೂತರ ಬಿನ್ನಪವನು ಕುಬೇರನು
ತಾಳಿದನತಿ ಕೋಪವನ್ನು
ಬಾಳು ಬಾಳೆಂದು ಖಂಡೆಯವೆತ್ತಿ ಮಂತ್ರಿಗೆ
ಪೇಳಿದನಾಗ ತಾ ಕರೆದು ೧೮

ಪುರವ ನೀ ಯುದ್ಧಗೈವರಿಗೊಶವಾಗದಂ
ತುರು ಸನ್ನಾಹವ ಮಾಡಿಸೀಗ
ಕರಿ ತುರುಗಾಳು ಸ್ಯಂದನಗಳು ಹೊರೆಯುಂತೆ
ಪೊರಡಲಿಯೆಂದನಾ ಧನದ ೧೯

ಬಿನ್ನಹವೆಲೆ ಜೀಯ ಕೋಪ ದೇವರಿಗೇತ
ಕೆನ್ನೆ ಕಳುಹಿಸಿಯುವನೆಡಗೆ
ಕುನ್ನಿಗಳೆನಿಸುವೆನವನ ಮುಂದಿಯುನೀಗ
ಲೆನ್ನುತ ನುಡಿದನಾ ಮಂತ್ರಿ ೨೦

ಹರುಷದಿಂ ಕೇಳಿ ಕುಬೇರ ತಾ ನಸುನಕ್ಕು
ತರವಲ್ಲವಿಂದಾ ಸಾಹಸವು
ಹರಿಕೃಪೆಯುವನೊಳತ್ಯಂತವಾಗಿದೆ ನೀ ಬೇ
ಗಿರದೆ ಸನ್ನಾಹಗೈಯೆಂದ ೨೧

ಕೇಳಿಯೂಳಿದನುಕ್ತಿಯುನ್ನು ಮಂತ್ರಿಯು ತಾನು
ಲೀಲೆಯಿಂದಲಿ ಬಲವನ್ನು
ಸಾಲುಗೂಡಿಯೆ ನಡೆಯುಲಿ ಯುದ್ಧವೆನ್ನುತ
ಪೇಳಿಸಿದನು ಚರರೊಡನೆ ೨೨

ಆಗಲಾದ್ಯೂತರೈದಿಯೆ ಸೇನೆ ಬರಲೆಂದು
ಬೇಗ ಡಂಗುರವನಾಡಿಸಲು
ಸಾಗಿ ಬಂದುದು ಬಲ ರಾಯನಿಂದಪ್ಪಣೆ
ಯಾಗಿ ಪೋಗುವೆವೆಂಬ ಭರದಿ ೨೩

ಬಂದುದು ಸಕಲಸೇನೆಯು ಜೀಯ ಚಿತ್ತವಿ
ಸೆಂದು ಮಂತ್ರಿಯು ಧನವನಿಗೆ
ನಿಂದು ಕೈಮುಗಿದು [ಪೇಳಿದ][1]ನರೆ ಭಯಗೂಡಿ
ಯಿಂದೇನನೆಂಬನೋ ಯೆನುತ ೨೪

ಕೇಳಿಯಾ ಧನದನು ಮಂತ್ರಿ ತನ್ನೆಡೆಗೈದಿ
ಪೇಳಿದ ವಾಕ್ಯದ ಪರಿಯ
ತಾಳಿ ಸಂತಸವನು ಚಿತ್ತದಿ ತಾ ಬಂದ
ನೋಲಗಗೊಡುವ ಚಾವಡಿಗೆ ೨೫

ಎಡಬಲದಲಿ ಚಾಮರಗಳೊಲೆಯುತ ಮೇಲೆ
ಕಡುಸಿತಛತ್ರ ಶೋಭಿಸುತ
ಅಡಿಗಡಿಗಲ್ಲಿ ವಂದಿಗಳು ಪೊಗಳಲಾಗ
ನಡೆತಂದ ಧನದ ಚಾವಡಿಗೆ ೨೬

ಬಂದು ಸಿಂಹಾಸನಾಗ್ರದೊಳು ಕುಳಿತು ಮಂತ್ರಿ
ಗೆಂದನು ಸೇನೆಯು ಬರಲಿ
ಎಂದ ಕುಬೇರ ಧ್ರುವನು ತಾನು ದಂಡೆತ್ತಿ
ಬಂದುದನಾಳೋಚಿಸುತ್ತ ೨೭

ಒಡೆಯನಾಡಿದ ಮಾತ ಕೇಳಿ ಮಂತ್ರಿಯು ತಾನು
ಕಡುವೇಗದಿಂದಲಿ ಸೇನೆ
ತಡೆಯದೆ ಬರಲಾಳಿದನ ಬಳಿಗೆನ್ನುತ
ನುಡಿದನು ಸಂತಸದಿಂದ ೨೮

1 ವೇಳಿ ಪೇಳಿದ

ನಿರುತವೀ ಧ್ರುವನ ಚರಿತೆಯನು ಭಕ್ತಿಯಿಂ
ಬರದೋದಿ ಕೇಳಿದ ಜನರ
ವರಚಿಕ್ಕನಾಗಪುರದ ವೆಂಕಟೇಶನು
ಪೊರೆವನು ಸುಖವಿತ್ತು ತಾನು ೨೯

# ಸರಿಯುಂಟೆ ಅಬಲೆಯರಿಂಗೆ

ಕೇಳೆಲೆ ರಾಜ ಧ್ರುವನು ತನ್ನ ಸೇನೆಯು
ಪಾಳೆಯುವಿಡಲಿಲ್ಲಿಯೆಂದು
ಪೇಳಲು ಮಂತ್ರಿಗಾತನು ನಗರಕೆ ದೂರ
ಕಾಳುಗಳನು ನಿಲಿಸಿದನು ೧

ಪುರದ ಮುಂದಣ ವನವನು ಕಂಡರಾ ಧ್ರುವ
ನುರ-ಸೇನೆಯಾನಂದದಿಂದ
ತರು ನದಿ ಕೊಳ ಸುಚರಿಪ ಪಕ್ಷಿ ಜನರನು
ಚ್ಚರಿಪಂಥ ಕವಿ ಯಾರು ಜಗದಿ ೨

ಸುರ ತರು ಜಾತಿಗಳಿದ್ದವೇನೆಂದೆಂಬೆ
ಸರಳಪಾತ್ರಗಳ್ ಕುರವಕವು
ವರಕುಂದ ಪುನ್ನಾಗವಟ್ಟ ಬಕುಳಂಗಳು
ನಿರುಪಮ ಚೂತವೃಕ್ಷಗಳು ೩

ಬಿರುದಿನ ಚಂಪಕ ನೀಪಾರ್ಜುನ ತಾಳೆ
ಗುರುತಿನಶ್ವತ್ಥ ವೃಕ್ಷಗಳು
ಪರತರ ಪ್ಲಕ್ಷ ಕದಂಬ ಸರ್ಜಾಣಂಗ (?)
ಳುರು ಸಾಲತರುಗಳೊಪ್ಪಿದವು ೪

ಲೋಲ ತಮಾಲ ಶೋಕಗಳ್ ನಾಗಪಾಟಲ
ಕಾಲದ ಪನಸ ಮಂದಾರ
ಮೇಲಾದುದುಂಬರ ಖರ್ಜೂರವಿಂಗುದಿ
ಜಾಲದ ವೃಕ್ಷವೊಪ್ಪಿದವು ೫

ಪರಿಪರಿ ವೃಕ್ಷ ಕುಸುಮಗೂಡಿರುವ ಪರ
ತರದ ಸೌಗಂಧಿಕವನವ
ನೆರೆಕಂಡು ಧ್ರುವನ ಸೇನೆಯು ತಾಳ್ದ ಸಂತಸ
ದಿರವ ನಾನೆಂತು ಬಣ್ಣಿಸುವೆ ೬

ನಂದೆ ಅಲಕನಂದೆಯೆಂಬ ನದಿಗಳೂರ
ಮಂದೆ ಶೋಭಿಸಿತು ನೋಳ್ಪರಿಗೆ
ಚಂದದ ಕೊಳಗಳೊಪ್ಪಿರಲದರಿರವನು
ವರ್ಣಿಸುವವರೆನ್ನಳವೆ ೭

ಈರೀತಿಯಾದ ಸಂಭ್ರಮಗಂಡು ಸ್ವರ್ಗದ
ನಾರಿಯರೈದಿ ಮೋದದೊಳು
ನೀರೊಳಾನಂದದಿಂ ಕೇಳಿಯಾಡುವರಲ್ಲಿ
ಯಾರಿಗೆ ವಶ ವರ್ಣಿಸುವರೆ ೮

ನಾರಿಯೊರ್ವಳು ಬಂದಳಾಕೊಳದೊತ್ತಿಗೆ
ದಾರಿದಪ್ಪಿಯೆ ಸೇನೆಬಿಟ್ಟು
ತೋರಿದಳೀ ಧ್ರುವನೇನೆಗೆ ಸ್ಮರನ ಕ
ರಾರಿಯೆಂತೆಂಬ ಭಾವದಲಿ ೯

ಮುಡಿದ ಸುಪುಷ್ಪ ಮಾಲೆಗಳಿಂದ ಫಣೆಯೊಳು
ಕಡುಪೊಳೆಯುವ ಮೃದಮದದಿಂ
ಕುಡಿ ಬಾಗಿಯೊಪ್ಪುವ ಪುರ್ಬಿನಿಂ ನಾಸಿಕ
ದೆಡೆಯ ಮುಕ್ತಾಮಣಿಯಿಂದ ೧೦

ಹಾರಗಳಿಂದ ಕರ್ಪೂರ ಕರಡಿಗೆವೊಲು
ತೋರುವ ಬಾಯ್ದೆರೆಯಿಂದ
ತೋರದ ಶಂಖಗೊರಳಿನಿಂದಲೆಸೆಯುತ
ನಾರಿ ಬಂದಳು ಕೊಳದೆಡೆಗೆ ೧೧

ಕಂಕಣರವದ ಕಾಲುಂಗಳ ಸರಪಣಿಯಂ
ಕಿಂಕಿಣಿಗಳ ಧ್ವನಿಯಿಂದ
ಬಿಂಕದಿಂ ಸಖಿಯರ್ಕೈದಲು ನುಡಿಯುವ ಸ್ವರ
ದಿಂ ಕಾಮನಂ ಜರೆಯುತ್ತ ೧೨

ಹೊಳೆಯುವ ಕಣ್ಣೊನೆಯಿಂದ ನೋಡುತ ತನ್ನ
ಬಳಸಿದ ಸಖಿಯರ ಮುಖವ
ಎಳೆನಗೆದೋರುತ ಪುರುಷರ ಚಿತ್ತವ
ಸೆಳೆಯುತಲೈದಿದಳಾಗ ೧೩

ಕೊಳದೆಡೆಗೈದಿ ಸೋಪಾನದ ಮೇಲವ
ಳಿಳಿದುಂಬರಲು ನೇತ್ರಯುಗದ
ವೊಳಹ ಕಂಡುರೆ ನಾಚಿ ಮೀನ್ಗಳು ಪಾತಾಳ
ಕಿಳಿದವೇನೆಂಬೆನಚ್ಚರಿಯ ೧೪

ತರುಣಿಯುರಿವರೆಲ್ಲ ಬಪ್ಪುದ ಕಂಡಾಗ
ಧರೆಯೊಳ್ ನಡೆಯಲಾಗ ನಾಚಿ
ವರಹಂಸ ಪಾರಿಪೋದವು ತಮ್ಮ ನಡೆ ಸಮ
ಬರದಿರಲಂಬರಕಾಗಿ ೧೫

* ಬಾಲೆಯು ಬೆನ್ನೊಳ್ ಪೊಂದಿರುವ ವೇಣಿಯು ಕಂಡು

x x x x x

---

* ಇಲ್ಲಿಗೆ 88ನೆಯ ಗರಿ ಮುಗಿಯುತ್ತದೆ. 89ನೆಯ ಗರಿ ಇಲ್ಲ 90ನೆಯ ಗರಿಯಿಂದ ಮುಂದುವರಿಸಲಾಗಿದೆ.

. ... ಭ್ರಮರ ಸಮೂಹಗ
ಳುಂಕ್ಕುವ ಹರುಷದಿಂದಾಗ
ಸೊಕ್ಕುತಲಿ ಜಲಸೌರಭ ಕೈದಿದ
ವಕ್ಕಜಗೊಳಿಸುತ ಜನರ ೨೬

ಭೃಂಗಗಳ್ಕೈದಿ ಕಮಲಗಳನುರೆ ಬಿಸು
ಟಂಗನೆಯರ ಮುಡಿಗಂಪ
ಹೊಂಗಿದ ಹರುಷದಿಂ ನೇರಿದೊಲ್ ಕುರುಳ್ಗಳ್
ವಿಂಗಡವಾಗಿ ಒಪ್ಪಿದವು ೨೭

ತಡಿಗೈದಿ ನಾರಿಯರ್ ತಮ ತಮ ಭೂಷಣ
ವಿಡುತ ಉತ್ತಮವಸನಗಳ
ಉಡುತ ಧೂಪದ ಪೊಗೆಗೊಡುತ ಕೇಶಕೆ ಮುದ
ವಡುವುವನೆಂತು ಬಣ್ಣಿಸುವೆ ೨೮

ಹಾಗೆ ಕುಸುಮಗಳನಾಗ ಕೊಯ್ಯುತ ಶುಭ
ರಾಗವನಿರದೆ ಪಾಡುತ್ತ
ಬೇಗ ಸರಂಗಟ ರಾಗದಿಂ ಮುಡಿದವರ್
ಪೋಗುವ ಸಿರಿಯನೇವೇಳ್ಕೆ ೨೯

ಮದಗಜಗಮನೆಯು ಮನ್ಮಥ ಕರದೊಳ
ಗೊದಗಿದ ಶಸ್ತ್ರದಂದಲಿ
ಇದಿರಿಟ್ಟು ನೋಳ್ಪ ಪುರುಷನ ಮನಕೆ ತಾವು
ಪೊದಿಸುವರತ್ಯಂತ ಭ್ರಮೆಯಂ ೩೦

ನಡೆಯುತ ಸಖಿಯರ ಹೆಗಲೊಳು ಕರಗಳ
ನಿಡುತಲಿ ಸರಸವಾತುಗಳ
ನುಡಿಯುತ ನೋಳ್ಪ ಪುರುಷರ ಕಣ್ಬಾಣದಿಂ
ದಿಡುತ ಸಾಗಿದರು ಸಂತಸದಿ ೩೧

ಯೋಗಿಗಳೆಂಬರ ಮಾನಸವನ್ನು ನಾ
ಬಾಗಿಸದಿಪ್ಪೆನೆಯೆಂದು
ಬೇಗ ಮನ್ಮಥ ತನ್ನ ದಂಡೆತ್ತಿ ನಡೆವನೆಂ
ಬ್ಬಾಗೆ ಕಾಣಿಸಿತು ನೋಳ್ಪರಿಗೆ ೩೨

ತರುಣಿಯರುಗಳ ನೋಡುತ ಪುರುಷರು ತಾವು
ಕರಗುವರಗ್ನಿಯುಬ್ಬಟೆಗೆ
ವರನವನೀತ ತನ್ನುರುಶಕ್ತಿಯಿಡುವಂತೆ
ಸರಿಯುಂಟೆಯುಬಲೆಯರಿಂಗೆ ೩೩

ಬಾಣದಿಂದಿಡೆ ತಾಕಿದೆಡೆಯ ಮಾತ್ರವೆ ಮತ್ತೆ
ತಾನು ಬಾಧಿಪುದು ನೋಡಲ್ಕೆ
ಈ ನಾರಿಯರ ದೃಷ್ಟಿಗೊನೆಶರ ತಗಲಲು
ಯೇನೇಬೆನುಳಿವೆ ದುರ್ಘಟವು ೩೪

ಹೊರಗೆ ಬಾಧಿಪನಗ್ನಿ ಸೋಂಕಿದ ರಾವನು
ತರುಣಿಯರ್ಕಣ್ಗೊನೆ ನೋಟ
ಇರದಂತರಂಗದೊಳ್ ಸರ್ವಾಂಗವನು ತಾ
ನುರಹುವಂದದಿ ಜ್ವಲಿಸುವದು ೩೫

ಅದರಿಸಿಂ ತರುಣಿಯರ್ಕೈದುವದಂ ಕಂಡು
ಎದೆಗಡುಸಿನ ಭಟ ಜನರು
ಹೆದರಿ ನೋಡುತ ಮರುಳಾಗುವರ್ಕೈ ಚಿತ್ರಾ
ರದ ಬೊಂಬೆಯಂತೆಯೋಮೇಳ್ವೆ ೩೬

ತರುಣಿಯರುಗಳ್ ಕುಂಭಕುಚೆಯರು ಧನದನ
ಪುರದೊಳಯಿಂಕೆ ನಡೆಯಲು
ಹರಿಭಕ್ತನಾದ ಧ್ರುವನ ಸೇನೆ ಜನರು ತಾ
ಳ್ದರು ಮುದವನ್ನು ಸಕಲರು ೩೭

ಅತ್ತಳಾನಂದದಿಂದಳಕಾನಗರದೊಳ
ಗತ್ಯಂತ ಕೋಪವ ತಾಳಿ
ಇತ್ತನು ನೇಮುವನಾ ಕುಬೇರನು ಸೇನೆ
ಗೊತ್ತಿ ಯುದ್ಧಕೆ ಪೋಗಿಯೆಂದು ೩೮

ನಿರುತವೀ ಧ್ರುವನ ಚರಿತೆಯನು ಭಕ್ತಿಯಿಂ
ಬರೆದೋದಿ ಕೇಳುವ ಜನರ
ವರಚಿಕ್ಕನಾಗಪುರದ ವೆಂಕಟೇಶನು
ಪೊರೆವನು ಸುಖವಿತ್ತು ದಯದಿ ೩೯

# ತಾವೈದಿದರು ನೆಲ ಜಡಿವಂತೆ

ಕೇಳಿಲಿ ರಾಜ ಕುಬೇರನು ತನ್ನಯ
ಕಾಲಾಳಶ್ವಾದಿಗಳಿಂದ
ಲೀಲೆಯಾಗಿಹ ಚತುರಂಗಸೇನೆಯ [ಹೊರ][1]
ಪಾಳೆಯುವಿಡಿಸಿದನಾಗ ೧

ಚಾವಡಿಗೈದಿದ ಧನದನಪ್ಪಣೆಯಿಂದ
ಲಾವಿಧ [ವಿಧ][2]ಸೇನಾಜಾಲ
ತಾವೈದಿದರು ನೆಲ ಜಡಿವಂತೆ ತೀವ್ರದಿಂ
ದೇವೇಳ್ವೆನದ್ಭುತವನ್ನು ೨

ತುರಗ ಪದಾತಿ ವಾರಣ ರಥಗಳು ಕೂಡಿ
ದುರುಬಲವನ್ನು ಲೆಕ್ಕಿಸದೆ
ಧರಣಿಯ ಪೊತ್ತ ಸಾಸಿರ ಶಿರಗಳ ಶೇಷ
ಗರಿದಾದುದೆಂತು ವರ್ಣಿಸುವೆ ೩

ಧೂಳು ಮುಸುಕಲಂಬರವ ಸೂರ್ಯಕಿರಣದ
ಜಾಲ ಕಾಣಿಸದಂದವಾಗೆ
ತಾಳಿ ಕೋಪವ ಧ್ರುವ ಮಾರ್ಬಲ ಬಪ್ಪುದ
ಗಾಲಿಗಳಿಂದ ತಾ ಕಂಡು ೪

---

1 ಹೊರೆಯ 2 ವಿಧದ

ತರತರವಾವ ಶಂಖವನು ಧ್ರುವನು ತಾನು
ಕರದೊಳಂ ಪಿಡಿದೆತ್ತಿ [ನುಡಿಸಿ]*

---

* 91ನೆಯ ಗರಿ ಇಲ್ಲಿಗೆ ಮುಗಿಯುತ್ತವೆ 96ರಿಂದ ಆರಂಭವಾಗಿದೆ ಮಧ್ಯೆ 18ನೆಯ ಸಂಧಿ ಮುಗಿದು 19ನೆಯ ಸಂಧಿ ಆರಂಭವಾಗಿದೆ

## ಸಾರಲನ್ಮೆವು ರಣದೆಡೆಗೆ

× × × × ×
× ಕೆಂಬ ಭಂಡವನಾವವನು
ಈ ಕೋಟಲೆಯು ಪಡೆಯೆಂದು ಹೊತ್ತಳೆ ಮಾತೆ
ಛೀ ಕರ್ಮಪೆಯೆಂದರವರು ೧೩

ಪ್ರಳಯ ಕಾಲವು ನಮ್ಮ ದೇಶಕ್ಕೆ ಬಂದುದೊ
ವಿಲಯರುದ್ರನೆ ಇವನೇನೊ
ತಲೆಗೊಂಬನೆಮ್ಮ ಸುಮ್ಮನೆ ಬಿಡನೆನ್ನುತ
ಬಲವೆಲ್ಲ ಜರುಗಿತಾಕ್ಷಣದಿ ೧೪

ಊರನಾದರೆಯು ಬಿಟ್ಟೈದಿಯಡವಿಯೊಳು
ನೀರು ಗೆಡ್ಡೆಗಳಾಹಾರದಲಿ
ತೀರಿಸಿ[ತ][1]ಮ್ಮಯ ಕಾಲಗಳನೆಂದು
ಸಾರಿದರ್ಧನದನಾಳುಗಳು ೧೫

ಸೇರಿ ಕುಬೇರನಿರುವ ಚಾವಡಿಗೆ ದೈನ್ಯ
ದೋರಿ ಗಾಯಗಳ ನೋಡೆನುತ
ಚೀರಿ ಪೇಳುತ್ತಲವನಿಯೊಳು ಬಿದ್ದು ನಾ
ವಾರೆವೆಂದರು ಕಾಳಗಕ್ಕೆ ೧೬

---

1 ಕೊಂ

ನಾರಾಯಣನೊ ಬ್ರಹ್ಮನೋ ರುದ್ರನೋ ಈಗ
ಲೀರಣದಲಿ ಕಾದುವವನು
ತೀರದೆಮಗೆ ಈತನೊಡನೆ ಕಾದುವರೆಂದು
ಚೀರಿದರ್ಧನದನ ಕೂಡೆ ೧೭

ಆರೆವಾವೆಲೆ ದೇವ ನಮ್ಮನೇ ನಗರದಿಂ
ದೂರಕಟ್ಟಿಸಿಬಿಡು ಈಗ
ಹಾರಿಸಿಬಿಡು ಶಿರಗಳನಲ್ಲದಿದ್ದಡೆ
ಸಾರಲಮ್ಮೆವು ರಣದೆಡೆಗೆ ೧೮

ತೊಡೆಗಳೊಳ್ಬೊರಟು ವಸಿಯು ಮೊಳಕಾಲುಗ
ಳುಡಿದವು ನಮ್ಮ ತಲೆಗಳು
ಒಡೆದವು ಪ್ರಾಣಮಾತ್ರವ ಬಿಟ್ಟನೀ ಧ್ರುವ
ಬಡವಾನಲೆಂದು ಪೇಳಿದರು ೧೯

ಕೇಳಿ ಕುಬೇರನು ಸೇನೆಯೆಲ್ಲವು ಬಂದು
ಪೇಳಿಕೊಂಡಾಲುವ ಬಗೆಯು
ಆಲಿಗಳ್ಕೆಂಪಡರುತಲಗ್ನಿಯಂದದೊ
ಳ್ತಾಳಿದನತಿ ಕೋಪವನ್ನು ೨೦

ಕಡುಕೋಪದಿಂದ ಕುಬೇರನು ಸೇನೆಯು
ಜಡಿದು ನೂಕೆಂದು ಪೇಳುತ್ತ
ಬಡವಾನಲೆಂದು ವೈರಿಯು ಪೊಗಳುವರೆಯೆ
ನ್ನೆಡೆಗೆ ಬಂದಿರೆಯೆಂದು ಮೊರೆದ ೨೧

ನರರೊಡನೀಗ ಯುದ್ಧವ ಮಾಡಲಾರದೆ
ಚರಣವ ಹಿಂದೆಗದೀಗ
ಬರುವರೆ ನಿಮ್ಮ ಜನ್ಮವದೇತಕೆನ್ನುತ
ಉರಿದೆದ್ದನಾಗ ಕುಬೇರ ೨೨

ನೂಕಿಸಿದನು ಹೇಳಿಕೊಂಬರೆ ಬಂದರಾ
ತಾ ಕೋಪವನ್ನು*

* 97ನೆಯ ಗರಿ ಇಲ್ಲ. 98ನೆಯ ಗರಿಯಿಂದ ಹೊಸ ಸಂಧಿ ಆರಂಭವಾಗಿದೆ.

# ಆ ಪಟುಭಟರು ಕಾದಿದರು

ಕೇಳಿಲೆ ರಾಜ ಕುಬೇರನಪ್ಪಣೆಯಿಂದ
ಲಾಳುಬಲವು ಬಂದು ಧ್ರುವನ
ಮೇಲೆ ಕೋಪವನೆಸಗುತ ಬಹು ಮಾಯುವ
ತಾಳಿ ಯುದ್ಧವ ನಡೆಸಿದರು ೧

ಬಾಗಿಲ ಬಿಟ್ಟು ಕುಬೇರನ ಸೇನೆಯೊ
ತ್ತಾಗಿ ಬಪ್ಪುದ ಧ್ರುವಬಲವು
ಆಗ ಕಂಡಾಲುತೆಲ್ಲಾಯುಧ ಬೀಸುತ
ತಾಗಿ ಕಾದಿ[ತು ಇ]ವರೊಡನೆ ೨

ಕೈದುಗಳಿಂದ ಹೆಣಗಿ ಬಳಲುತ ಮತ್ತೆ
ಪೊಯ್ದಾಡಿದರು ಮುಷ್ಟಿಯಿಂದ
ಬಾಧೆ ಹೆಚ್ಚಲು ಗುಂಡುಗಲ್ಗಳಿಂದಿಟ್ಟರು
ಕ್ರೋಧದಿಂದುಭಯ ಸೇನೆಯೊಳು ೩

ಈ ಪರಿಯೊಳು ಯುದ್ಧಗೈಯಲು ಧನದನ
ಜೋಪಾನವಾದಂಥ ಬಲವು
ಏ ಪೇಳ್ವೆ ಸೊಕ್ಕು ಮಾಯೆಯ ಬೀಸಿ ಧ್ರುವಸೇನೆ
ಗಾ ಪಟುಭಟರು ಕಾದಿದರು ೪

---

1 ದಂ

ಮೋದಮುಸುತಾಗ ದಿಕ್ಕುದಿಕ್ಕಿಗೆ ಮಿಂಚು
ಕೂಡಲೆ ಪ್ರೊಳೆದು ಕಣ್ಮುಚ್ಚಿ
ಕಾಡಿಸಿತುರೆ ಸಿಡಿಲ್ಗುಡು[ಗು]ಗಳಾರ್ಜಟೆ
ಮಾಡಿದವೆಂತು ಬಣ್ಣಿಸುವೆ ೫

ಹುಲಿಗಳು ಬಂದು ಬಾಧಿಸಿದವು ಬಹು ಸಿಂಹ
ಗಳು ಬಲವನ್ನು ಕಾಡಿದವು
ತಲೆಗಳ ಮೇಲಪರಿಮಿತ ಗುಂಡುಗಳ್ಬಿದ್ದು
ಮಳೆಯೊಳು ಮುಳ್ಳು ಹೆಚ್ಚಿದುದು ೬

ದೆಸೆದೆಸೆಯಿಂದ ಬಾಣಗಳುರೆ ಬಂದಾಗ
ಮುಸುಕುವುವೈ ಸೇನೆಯನ್ನು
ಅಸಿಯು ವೃಷ್ಟಿಯು ಸುರಿದುದು ಕೆಂಡವರ್ಷವು
ಬಿಸಿರಕುತದ ಮಳೆಯಾಯ್ತು ೭

ಆಲುತನಾಯಿಗಳ್ಕಚ್ಚಿದವಗ್ನಿಯು
ಜ್ವಾಲೆ ಹೆಚ್ಚಿಯೆ ದಹಿಸಿದುದು
ಹೇಳುವದೇನಿನ್ನು ಧ್ರುವನ ಸೇನೆಯುನೆಲ್ಲ
ಕಾಲುಗೆಡಿಸಿತರಿಸೇನೆ ೮

ಹೊಟ್ಟೆಗಳೊಳಗೆ ಶೂಲಗಳು ಬಂದೊಗುವಂಥ
ಕಷ್ಟವನೇನೆಂಬೆ ಮತ್ತೆ
ಇಟ್ಟಿಗಳಿಂದಿರಿದಂತೆ ಬಾಧೆಯು ತೋರ್ದ್
ದಷ್ಟು ಬಲಕು ಮಾಯೆಯಿಂದ ೯

ಕಲ್ಲಮಳೆಯು ಬೆಂಕಿಮಳೆಯು ಶಸ್ತ್ರದ ಮಳೆ
ಬಲ್ಲೆಯ ಮಳೆ ಶೂಲಮಳೆಯು
ಬಲ್ಲಿದ ಬಾಣದ ಮಳೆಗಳು ಧ್ರುವಸೇನೆ
ಯಲ್ಲಿಯೆ ಸುರಿದು[ವ][1]ದ್ಭುತದಿ ೧೦

1 ದ

ಸುತ್ತಲು ಕತ್ತಲೆ ಮುತ್ತಿತು ನೆತ್ತರು
ಕತ್ತಿಗಳೊತ್ತಿ ಬೀಳುತ್ತ
ಎತ್ತಲು ನೆತ್ತಿಯು ಕುತ್ತುಪರತ್ಯಂತ
ಮತ್ತೇಭ ಮುತ್ತೆಯುಟ್ಟುತ್ತ ೧೧

ತುರಗಗಳುರೆ ಕಾಲೊದರಿಯುರಿಗಳ ಬಲು
ತರುಬುತಲಿರೆ ರಥ ಬಂಡಿ
ಉರುಳ್ದರು ನರರೆಲ್ಲರರೆದು ಪೋದರುಯೆಂಬ
ಬರವಾಗಿ ಮರಳಿ ತೋರಿದುದು ೧೨

# ಮನು ಬಂದ ಮೊಮ್ಮಗನೆಡೆಗೆ

ಕೇಳೆಲೆ ರಾಜ ಧ್ರುವನು ಹರಿ ಚರಣವ
ಲೀಲೆಯಿಂದಂ[ತರಂ]ಗದೊಳು
ತಾಳಿ ನಾಮಂಗಳ ಸ್ಮರಿಸಿ ಸ್ತುತಿಸಿದನೇ
ವೇಳುವೆನಚ್ಚರಿಯನ್ನು ೧

ಹರಿಮುರಹರ ನೀನಿರಲು ಮತ್ತೆನಗೊಂದು
ಬರುವುದೆ ಭಯ ನಿನ್ನ ಕರುಣ
ಯಿರಲು ಸರ್ವೇಶ ಶ್ರೀ ವಾಸುದೇವನೆಯೆಂದು
ಸ್ಮರಿಸಿದ ಧ್ರುವನು ಚಿತ್ತದಲಿ ೨

ಮಾಂ ತ್ರಾಹಿ ಶ್ರೀನಾಥ ಮಾಂ ತ್ರಾಹಿ ಮುನಿನುತ
ಮಾಂ ತ್ರಾಹಿ ಶಿವ ವಾಸುದೇವ
ಮಾಂ ತ್ರಾಹಿ ಗೋವಿಂದ ಮಾಂ ತ್ರಾಹಿ ಸುರವಂದ್ಯ
ಮಾಂ ತ್ರಾಹಿ ಭವಹರದೇವ ೩

ಎಂದಿಂತು ಧ್ರುವನು ಶ್ರೀವಾಸುದೇವನ ನೆನ
ದಂದದಿ ಧನುವ ತೆಕೊಂಡು
ಹೊಂದಿಸಿ ನಾರಿಯು ಜೇವಡೆಗೈದು ತಾ
ತಂದನು ಖತಿಯು ಚಿತ್ತಕ್ಕೆ ೪

ನಾರಾಯಣಾಸ್ತ್ರವ ತೆಗೆದ ಮಾತ್ರಕ್ಕೆ ಕುಂ
ಬೇರನ ಸೇನೆಯು ಮಾಯೆ
ಕಾರುಗತ್ತಲೆಗಿನ ಬಂದಂತೆ ಹರಿದುದು
ತೋರಿತು ಕಾಲಾಗ್ನಿಯಂತೆ ೫

ತಿರುವಿಗೆ ತೊಡಿಸಿ ಬಾಣಗಳ ಬಹಳವಾಗಿ
ಸುರಿದು ಧ್ರುವನು ಮತ್ತೆ ನೆನೆದು
ಪರಮ ನಾರಾಯಣಾಸ್ತ್ರವ ಬಿಡೆ ಬಂದುದು
ಮೊರೆಯುತ ರಿಪುಸೇನೆಯೆಡೆಗೆ ೬

ಬರಲು ನಾರಾಯಣಾಸ್ತ್ರವು ಯಕ್ಷರೆಸಗಿದ
ಪರಿ ಪರಿ ಮಾಯೆ ತಾ ಹರಿದು
ಹರುಷವು ಧ್ರುವಬಲಕಾದುದೇನೆಂಬೆನ
ಚ್ಚರಿಯನಸ್ತ್ರದ ಮಹಿಮೆಯನು ೭

ಧನದನ ಸೇನೆಯೆಲ್ಲವು ಕಾಳ್ಗಿಚ್ಚಿನೊ
ಳೊಣಗಿದ ತೃಣ ಸಿಕ್ಕಿದಂತೆ
ಘನವಾದ ಜ್ವಾಲೆಯಿಂ ಬಳಲುತಲಿರಲಾಗ
ಮನು ಬಂದ ಮೊಮ್ಮಗನೆಡೆಗೆ ೮

ಬರಲಾಗ ಮನುವು ಧ್ರುವನು ತಾನು ಹರುಷದಿ
ಚರಣ[ಗಳೊಳು] ಶಿರವಿರಿಸಿ
ಎರಗಿ ಕೈಮುಗಿದು ಕೇಳಿದನು ಇಲ್ಲಿಗೆ [ಬಂ]ದ
[ಪರಿಯ]ನು ಬೆಸಸಿ ನೀವೆಂದು ೯

ಮೊಮ್ಮಗನಾಡಿದ ಮಾತುಗಳನು ಕೇಳು
ತೊಮ್ಮೆ ನಕ್ಕಾಗಲಾ ಮನುವು
ಬೊಮ್ಮನಯ್ಯನ ಪದದಲಿ ಭಕ್ತಿಯಿರಲಿ ಮ
ತ್ತೊಮ್ಮೆಯು ಕದಲದೆಯೆಂದ ೧೦

ಹರಸಿ ಮಂಡೆಯೊಳು ತನ್ನಯ ಕರ [ವಿರಿಸಿ] ಮ
ತ್ತ್ಯುರುತರ ಸಂತಸದಿಂದ
ತರುಣ ಕೇಳ್ ನೀನತಿ ಸಾಹಸಿಯೆನ್ನುತ
ಲಿರದೆ ಕೊಂಡಾಡಿದನಾಗ ೧೧

ಹರಿ ಚರಣಾಬ್ಜ ಸೇವಕರು ತಾವೀ ಪರಿ
ಧರಿಸುವರೆ ಚಿತ್ತದಲ್ಲಿ
ಪರರೊಳು ದ್ವೇಷವನದರಿಂದ ಕೋಪವ
ಧರಿಸದಿರಿನ್ನು ನೀನೆಂದ ೧೨

ಪರಹಿಂಸೆಯಿದು ಯೋಗ್ಯವಲ್ಲೆಲೆ ಮೊಮ್ಮ ನೀ
ನರಿಯದನಲ್ಲ ನಾಂ ಪೇಳೆ
ಕರಕಷ್ಟಗೊಂಬರೀ ಧನವನಾಳುಗಳೆಲ್ಲ
ಪರಿಹರಿಸಿದರುರಿಯನ್ನು ೧೩

ಎಲ್ಲರೊಳಿಹ ವಾಸುದೇವನು ವ್ಯಾಪಿಸಿ
ಕೊಲ್ಲಲು ನೀ ಮನ ತಹುದು
ಸಲ್ಲದು ನಿನಗೆಲೆಯಣುಗ ಕೇಳ್ ಕೋಪವ
ನಿಲ್ಲಿಸಬೇಡ ಚಿತ್ತದಲಿ ೧೪

ಇಂತೆಂದು ಮನುವು ಪೇಳಲು ಕೇಳಿ ಧ್ರುವನು ತ
ನ್ನಂತರಂಗದಿ ಬಹು ಮರುಗಿ
[ಚಿಂತಿ]ಸಿ ಶ್ರೀ ಹರಿಯಂಘ್ರಿಯನಬ್ಜಗೆ
ನಿಂತು ಕೈಮುಗಿದು ಬೇಡಿದನು ೧೫

ಕ್ಷಮಿಸಿಕೊಳ್ಳಲಿಬೇಕು ಈಗಲೆ ನೀ ಮಾಯಾ
ಭ್ರಮಿತನಾದೆನ್ನ ದೋಷಗಳ
ವಿಮಲಾಂತರಂಗನಾದೆನು ಕೋಪವೆಂಬುದ
ನಮರಿಪುದಿಲ್ಲ ಚಿತ್ತಕ್ಕೆ ೧೬

ಎನಲಾಗ ಹರಸಿಯಾ ಧ್ರುವನ ತಾನೈದಿದ
ಮನುವು ಸಂತೋಷವ ತಾಳಿ
ಮನದಿ ಶ್ರೀ ವಾಸುದೇವನ ಪಾದಪದ್ಮವ
ನೆನೆಯುತ ನಿಜರಾವಿಗಾಗಿ ೧೭

ಕೇಳಿ ಕುಬೇರನೀ ಧ್ರುವನು ದ್ವೇಷವ ಬಿಟ್ಟು
ಪಾಳಯವನು ಕೂಡಿಕೊಂಡು
ಲೀಲೆಯಿಂ ಪೋಪನೆಂಬುದನಾಗ ಮುದವನ್ನು
ತಾಳಿದನೆಂತು ಬಣ್ಣಿಸುವೆ ೧೮

ಆಗ ತನ್ನಯ ಸಿರಿ ಸಹಿತೈದಿ ಧ್ರುವನೆಡೆ
ಗಾಗಿಯಾಲಿಂಗನಗೈದು
ಬೇಗ ಕೇಳ್ನಿನಗೆ ಬೇಕಾದಿಷ್ಟವನ್ನೆಂದು
ರಾಗದಿ ನುಡಿದ ಕುಬೇರ ೧೯

ಧನದನಾಡಿದ ಮಾತ ಕೇಳಿ ಧ್ರುವನು ತಾನು
[ಮನದಿ ಸಂ]ತೋಷವ ತಾಳಿ
ಅನುಪಮವಾದಂಥ ವರವ ಕೇಳು[ಯೆನೆ
ಮನದೊಳಾಲೋ]ಚಿಸಿಗೊಳುತ ೨೦

ಒಲ್ಲೆನನ್ಯವನೆಲೆ ಧನದ ವಾಸುದೇವ
ನಲ್ಲಿಯಮಲವಾದ ಭಕ್ತಿ
ನಿಲ್ಲುವಂದದಿ ಪರಹಿಂಸೆಗೆ ಚಿತ್ತವು
ಒಲ್ಲದಂದದಲಿ ಕೊಡೆಂದ ೨೧

ಅಸ್ತು ನಿನಗೆಯೆಂದು ಧನದನು ಹರಸಿ ತಾ
ಕುಸ್ತುರಿಸುತ [?] ಧ್ರುವನನ್ನು
ವಿಸ್ತರಸೇನೆ ಸಹಿತಪುರಕ್ಕೈದಿದ
ಶಿಸ್ತನೇನೆಂದು ಬಣ್ಣಿಸುವೆ ೨೨

ಆಗಲಾ ಧ್ರುವನು ತನ್ನಯ ಪುರಕೈದಿದ
ರಾಗದಿಂ ಬಲವೆಲ್ಲ ಕೂಡಿ
ಬೇಗದಿಂದಖಿಳ ಪ್ರಜೆಗಳ ಕ್ಲೇಶಂಗಳ
ನೀಗಿ ಪಾಲಿಸಿದ ಭೂತಳವ ೨೩

ಭ್ರಮಿಯೆಂಬ ರಾಣಿಯೊಳ್ ಧ್ರುವನಿಗೆ ಜನಿಸಿದ
ರಮಲ ನಾಮಂವ ತಾಳ್ದ ಸುತರು
ಕಮಲಾಕ್ಷ ಕರುಣದಿಂ ಕಲ್ಪವತ್ಸ[ರ]ರೆಂದು
ಸುಮತಿ ಹಿಗ್ಗಿದಳು ಸಂತಸದಿ ೨೪

ಎರಡನೆಯರಸಿಯಾದಾ ವಾಯು ತನುಜೆ ಯಾ
ದುರು ಗುಣವತಿಯೆಡೆಯಲ್ಲಿ
ವರಪುತ್ರಉಲ್ಕಲನೆಂಬನಂದು x x x *

*[ಇಲ್ಲಿಗೆ 103ನೆಯ ಓಲೆಗರಿ ಮುಗಿಯಿತು.104 ಮತ್ತು 105ನೆಯ ಗರಿಗಳು ನಷ್ಟವಾಗಿವೆ. 106ನೆಯ ಗರಿ ಹೊಸ ಸಂಧಿಯ 6ನೆಯ ಪದ್ಯದ ಅರ್ಧಭಾಗದಿಂದ ಆರಂಭವಾಗಿದೆ.]

# ಸಾರಿದರಾಗ ಉತ್ಸವಕೆ

x x x x x x
X X X X X
X X X X X ಹರುಷವ
ನಾಗತಾಳಿದ ಧ್ರುವರಾಯು ೬

ಕರಸಿದರಖಿಳ ದೇಶಗಳರಸುಗಳನು
ಬರಿಸಿದ ಋಷಿವರರನ್ನು
ತರಿಸಿದರಖಿಳ ಭೂಷಣವಸನಂಗಳ
ನಿರಿಸಿದ ರಕ್ಷಕರನ್ನು ೭

ಪರಿಪರಿ ಸ್ವರ್ಣಪೀತಾಂಬರಗಳನಿರಿ
ಸಿರುವಂಥ ಶಾಲೆಯ ನೋಡೆ
ನೆರೆ ನೋಳ್ಪರಂಬಕಗಾಬ ತನಕವಿದ್ದು
ದುರೆ ವರ್ಣಿಸುವರಾರಿಗಳವು ೮

ಧನವನು ಸುರಿದರು ತಂದು ಬೆಟ್ಟಗಳಂತೆ
ಧನದನು ನಾಚುವ ತೆರದಿ
ಅನುವಾಗಿ ದ್ವಿಜರಿಗೆ ದಾನಗೈಯುವುದಕ್ಕೆ
ಘನಮಹಿಮನು ಧ್ರುವರಾಯ ೯

ಬಂದರು ದೊರೆಗಳು ಗಜ ಹಯ ರಥಗಳೊ
ಳಂದದಿಂ ಧನವನು ಕೊಂಡು
ಅಂದರಸಗೆ ಕಾಣಿಕೆಯನಿತ್ತು ಬಿಡದಿಗೆ
ಬಂದರು ಪರಮೋತ್ಸವದಿ ೧೦

ನಾರದ ಕೌಶಿಕ ಚ್ಯವನ ದತ್ತಾತ್ರೇಯ
ಭಾರದ್ವಾಜನು ವ್ಯಾಸ ಕಣ್ವ
ಧೀರನಂ ಮೈತ್ರೇಯನತ್ರಿ ಜಾಬಾಲಿಗಳ್
ಸಾರಿ[ದರಾಗ ಉ]ತ್ಸವಕೆ ೧೧

ಹರಿಯಣುಗನ ಶಿರವೆಚ್ಚನಿಗಸ್ತ್ರವ
ಕರುಣಿಸಿದವನ ವಶಾವನಿಗೆ
ಅರಿಯದವನಿಗೆ ಕೋಪದಿ ಶಾಪವಿತ್ತಂಥ
ಪರಋಷಿ ಬಂದನು ಮಖಕೆ ೧೨

ಗಣಿಪಡೆ ಶೇಷನಿಗರಿದಾಗುವಂದದಿ
ಮುನಿಜನ ಬಂದುದು ಮುದದಿ
ಅನುಪಮ ಧ್ರುವನ ಯಜ್ಞವಬಳಸಿದ[ರೆಂ][2]ದು
ಘನವನುಚ್ಚರಿಪೆ ಸರ್ವವನು ೧೩

[ಇಲ್ಲಿಗೆ 106ನೆಯ ಗರಿ ಮುಗಿಯಿತು 110ನೆಯ ಗರಿಯಿಂದ ಮುಂದೆ ಪ್ರಾರಂಭವಾಗಿದೆ. ಇದು ಕೊನೆಯ ಗರಿಯಾಗಿದ್ದು ತುಂಬ ತ್ರುಟಿತವಾಗಿದೆ]

ಎಂದಿಂತು ಭಾಗವತದೊಳು ನಾಲುಕನೆಯ
[ಸ್ಕಂಧದಿ] ಧ್ರುವನ ಚರಿತೆಯು
ಪೊಂದಿರಲಂದದಿ ಧನ್ಯ ನಾನಾಗುವೆ
ನೆಂದು ವರ್ಣಿಸುವೆ ಲಾಲಿಪುದು ೩೯

---

1 ನೆಂ
2 ರೆಗ್ಲ

ಹರಿಯು ದಾಸರ ದಾಸ ದಾಸ ದಾಸರ ದಾಸ
ಚರಣದಾಸರ ದಾಸರುಗಳ
ನಿರುತ ಸೇವಿಪ ತಿಮ್ಮದಾಸ ಪೇಳಿದ ಧ್ರುವ
ಚರಿತೆಯನಿದನು ಲಾಲಿಪುದು ೪೦

ತರುಣ ನಾಗಪುರಪತಿ ವೆಂಕಟೇಶನು
ಗುರುವಾಸುದೇವ ತಾನಾಗಿ
ಕರುಣ[ದಿಂ] ತಿಮ್ಮದಾಸನ ಪರಿಪಾಲಿಪ
ಹರಿ ನಿಮಗೀಯುವ ಸುಖವ ೪೧

ಪರಮಪಾವನ ನಾರಾಯಣ ಶಿವ ಸಖ
ಸುರಪತಿನುತ ವಾಸುದೇವ
ಉರುಪ್ರೀತಿಯಿಂ ಧ್ರುವಚರಿತೆಯ ಕೇಳ್ವರ
ಪೊರೆವ ಬಿಡದೆ ಸುಖವಿತ್ತು ೪೨

ಸಿ[ರು]ತವೀ ಧ್ರುವನ ಚರಿತಯನು ಭಕ್ತಿಯಿಂ
ಬರೆದೋದಿ [ಕೇಳಿದ] ಜನರ
ವರಚಿಕ್ಕನಾಗಪುರದ ವೆಂಕಟೇಶನು
ಪೊರೆವ[ನು ಸುಖವಿತ್ತು ದಯದಿ] ೪೩

# ಶಬ್ದಕೋಶ

(ಸೂಚನೆ : ಮೊದಲನೆಯ ಸಂಖ್ಯೆ ಪುಟವನ್ನೂ, ಎರಡನೆಯ ಸಂಖ್ಯೆ ಪದ್ಯವನ್ನೂ ಸೂಚಿಸುತ್ತವೆ)

| | | |
|---|---|---|
| ಅಕ್ಕೆ | ೫೧—೫ | ಅಳು, ಆಕ್ರಂದನ |
| ಅಂಕ | ೧೬—೫ | ತೊಡೆ |
| ಅಣುಗ | ೫೨—೨೩ | ಮಗ |
| ಅನಿಶ | ೩೯—೩೦ | ಸದಾ, ಯಾವಾಗಲೂ |
| ಅಬ್ಜ | ೧೨೬—೧೨ | ಕಮಲ |
| ಅಂಬಕ | ೧೩೧—೪೫ | ಕಣ್ಣು |
| ಅಂಬಟೆ | ೭೭—೭ | ಅಮಟೆ |
| ಅಂಬರ | ೨೫—೭ | ವಸ್ತ್ರ |
| ಅಮರಿ | ೩೫—೧೦ | ನೆಮ್ಮಿ |
| ಅಮರು | ೫೨—೨೨ | ಒದಗು |
| ಅರವಟ್ಟಿಗೆ | ೮—೧೫ | ಪ್ರಯಾಣದ ನಡುವೆ ದಾಹ ಕಳೆಯಲು ನೀರು ಕೊಡುವ ಮನೆ |
| ಅರ್ಕ | ೧೩೨—೫೦ | ಸೂರ್ಯ |
| ಅರ್ಜುನ | ೧೦೩—೭ | ೧) ಪಾರ್ಥ ೨) ಮತ್ತಿಮರ, ಹುಲ್ಲು |
| ಅರ್ಭಕ | ೫—೨೧ | ಮಗ |
| ಅಹಿನಾಥ | ೧೩೪—೬೦ | ಸರ್ಪರಾಜ, ಆದಿಶೇಷ |
| ಆಯತಾಕ್ಷಿ | ೨೯—೩೧ | ವಿಶಾಲಾಕ್ಷಿ, ಅಗಲವಾದ ಕಣ್ಣು ಇರುವವಳು |
| ಆಲುತ | ೧೬೧—೨ | ಕೂಗುತ್ತ |
| ಆಸ್ಯ | ೯—೨೨ | ಮುಖ |
| ಇಕ್ಷುದಂಡ | ೧೩೪—೬೩ | ಕಬ್ಬಿನ ಕೋಲು |
| ಇಂಗಡಲು | ೧೧೪—೨೦ | ಹಾಲಿನ ಸಮುದ್ರ |
| ಇನ | ೨೫—೯ | ಸೂರ್ಯ |
| ಇಪ್ಪೆ | ೧೦೩—೯ | ಹಿಪ್ಪೆ |
| ಉಗ್ಘಡಿಸು | ೧೩೫—೬೫ | ಜಯಕಾರ ಮಾಡು |

| | | |
|---|---|---|
| ಉದುಂಬರ | ೧೫೧—೫ | ಔದುಂಬರ ಮರ ; ಅತ್ತಿಯ ಮರ |
| ಉಪರಿ | ೬೩—೩೩ | ಮೇಲಿನ |
| ಉಬ್ಬಸ | ೧೧೩—೧೧ | ಸಂಕಟ |
| ಉಲುಹು | ೧೬—೬ | ದನಿ, ಮಾತನಾಡು |
| ಊಣಯ | ೯೬—೩ | ಊನ, ಕುಂದು |
| ಊರ್ಧ್ವಪುಂಡ್ರ | ೧೪೪—೨ | ಮೇಲುಭಾಗಕ್ಕೆ ಎಳೆದ ನಾಮ |
| ಎರಳೆ | ೧೦೮—೩೯ | ಜಿಂಕೆ |
| ಒಗುಮಿಗು | ೧೨೭—೭೧ | ಹೆಚ್ಚಾಗು |
| ಒರೆ | ೮೨—೩೫ | ಮಾತಾಡು, ಹೇಳು |
| ಕಡಿಯಪ್ಪುದು | ೬೨—೨೩ | ತುಂಡಾಗುವುದು |
| ಕಂತು ಜನಕ | ೧೧೫—೨೬ | ಮನ್ಮಥನ ತಂದೆ, ವಿಷ್ಣು |
| ಕಂತುಪಿತ | ೧೫—೫೬ | ಮನ್ಮಥನ ತಂದೆ, ವಿಷ್ಣು |
| ಕದಪು | ೭೦—೧೯ | ಕೆನ್ನೆ |
| ಕಡವೆ | ೧೦೮—೪೦ | ಒಂದು ಜಾತಿಯ ಜಿಗರೆ |
| ಕಡಸು | ೧೦೮—೪೦ | ಪ್ರಾಯಕ್ಕೆ ಬಂದ ಹೆಣ್ಣು ಕರು |
| ಕನಕಗರ್ಭ | ೮೧—೩೦ | ಬ್ರಹ್ಮ |
| ಕಪಿತ್ಥ | ೧೧೧—೩ | ಬೆಳವಲ ಗಿಡ |
| ಕಾಳಬುದ್ಧಿ | ೬೧—೨೧ | ದುಷ್ಟಬುದ್ಧಿ |
| ಕಾಳಾಹಿವೇಣಿ | ೮೯—೭೪ | ಕೃಷ್ಣಸರ್ಪದಂತೆ ಜಡೆಯಿರುವವಳು |
| ಕಾಳಿಂದಿ | ೧೦೩—೫ | ಯಮುನಾನದಿ |
| ಕುಟಿಲ ಕುಂತಳ | ೨೨—೩೯ | ಗುಂಗುರು ಕೂದಲು |
| ·ಕುಂದಕುಟ್ಮಲ | ೧—೩ | ಮಲ್ಲಿಗೆ ಮೊಗ್ಗು |
| ಕುಂಡಲ | ೨೬—೧೪ | ಕಿವಿಯ ಆಭರಣ |
| ಕುಪ್ಪಿ | ೮೦—೨೫ | (ಹಣದ) ಕುಪ್ಪೆ, ಮೊತ್ತ |
| ಕೂಪ | ೧೨೫—೧೦ | ಬಾವಿ |
| ಕೊಂತ | ೧೪೧—೧೯ | ಸಬಳ, ಕತ್ತಿ |
| ಕ್ಷುತ್ | ೧೩೧—೪೩ | ಹಸಿವೆ |
| ಖಂಡೆಯ | ೧೪೭—೧೮ | ಖಡ್ಗ |
| ಖಮ್ಮನೆ | ೨೭—೧೭ | ಘಮ್ಮೆನ್ನುವ |
| ಗಳ | ೭೧—೨೩ | ಕೊರಳು |
| ಗೋಘೃತ | ೧೩೬—೭೧ | ಹಸುವಿನ ಹಾಲಿನಿಂದ ಸಿದ್ಧವಾದ ತುಪ್ಪ |
| ಗೋಪಾಳ | ೬೮—೭ | ಭಿಕ್ಷೆ, ತಿರುಪೆ |

| | | |
|---|---|---|
| ಘಲ್ಲಣೆ | ೧೪೨—೨೫ | ಘಟಣೆ, ತಾಡನ, ಬಡಿತ್ತ |
| ಚೂತ | ೭೭—೭ | ಮಾವು |
| ಚೆಂಬೂತ | ೧೦೯—೪೩ | ಕೆಂಬೂತ |
| ಜಕ್ಕವಕ್ಕಿ | ೧೦೯—೪೫ | ಚಕ್ರವಾಕ ಪಕ್ಷಿ |
| ಜಂತೆ ಸಾಲು | ೯೩—೧೧೩ | ಮಾಳಿಗೆಯ ಕೆಳಗಿನ ಬಿದಿರ ಸಾಲು |
| ಜಾನು | ೭೨—೩೩ | ಮೊಳಕಾಲು |
| ತಂಡುಲ | ೮೦—೨೪ | ಅಕ್ಕಿ |
| ತಾರಕಿ | ೭೭—೧೦ | ನಕ್ಷತ್ರ |
| ತೇಜಿಷ್ಠ | ೩೬—೧೧ | ತೇಜೋವಂತ |
| ತೋರಮುತ್ತು | ೭೧—೨೩ | ದಪ್ಪಮುತ್ತು |
| ದಸಿ | ೧೫೯—೧೯ | ಚುಚ್ಚುಕೋಲು |
| ದಾವಂ | ೭೨—೩೨ | ಡಾಬು, ಪಟ್ಟಿ |
| ದುರಿತ ಧ್ವಾಂತಮಿತ್ರ | ೧೧೯—೪೮ | ಕೇಡೆನ್ನುವ ಕತ್ತಲೆಗೆ ಸೂರ್ಯ |
| ನಾಗವಲ್ಲಭ | ೧೦೪—೧೯ | ಗಜಪತಿ, ಐರಾವತ |
| ನೀಲಾಭ್ರ | ೮೨—೩೭ | (ನೀಲಿ ಆಕಾಶ) ಆಕಾಶ ನೀಲಿ |
| ನೇಹ | ೮೮—೭೧ | ಸ್ನೇಹ |
| ಪನಸ | ೭೭—೭ | ಹಲಸು |
| ಪಯೋಧಿ | ೧೨೮—೨೪ | ಹಾಲಿನ ಸಮುದ್ರ |
| ಪರ್ಯಂಕ | ೧೩೬—೭೩ | ಮಂಚ |
| ಪಾದರಿ | ೮೫—೫೩ | ೧) ಪಾದರಿ ಹೂವು ೨) ಹಾದರಗಿತ್ತಿ |
| ಪುಷ್ಪಕ | ೮೩—೪೬ | ಹೂವು |
| ಪೂಗ | ೭೭—೭ | ಅಡಕೆ |
| ಪೊಂಕದಿ | ೯೧—೯೮ | ಹುರುಪಿನಿಂದ |
| ಫುಲ್ಲ | ೫೬—೪೨ | ಅರಳಿದ |
| ಫೌಜು | ೧೪೧—೨೧ | ಸೈನ್ಯ |
| ಬಟುವಾಗಿ | ೮೧—೩೪ | ದುಂಡಾಗಿ |
| ಬಡಬ | ೭—೮ | ಬಡಬಾಗ್ನಿ, ಕಡಲ ತಳದಲ್ಲಿ ಅಡಗಿದ ಕಿಚ್ಚು |
| ಬದರಿ | ೧೧೧—೩ | ಬೋರೆಯ ಮರ |
| ಬಳಿ | ೭೯—೧೮ | ದಾರಿ |
| ಬಾಹುಪುರಿ | ೨೬—೧೪ | ತೋಳ, ಸರಿಗೆ ಒಂಕಿ |
| ಭೋದಿಗೆ | ೯೩—೧೧೨ | ಕಂಬ ಮತ್ತು ತೊಲೆಗಳ ನಡುವಿನ ಮರ ಅಥವಾ ಕಲ್ಲಿನ ಮಣೆ |

| | | |
|---|---|---|
| ಭಲ್ಲೆಯಂ | ೧೪೧—೧೯ | ಈಟಿ |
| ಭಾರದ್ವಾಜ | ೧೦೯—೪೩ | ಮುಂಗಿಲಿನಲ್ಲಿ ಹೆಚ್ಚಾಗಿ ಹಾರುವ ಒಂದು ಪಕ್ಷಿ. ಬಾನಾಡಿ |
| ಭಾವೆ | ೧೮—೧೭ | ಭಾಮೆ, ಸ್ತ್ರೀ |
| ಭುಜಗೇಶ | ೮೧—೩೧ | ಸರ್ಪರಾಜ, ಆದಿಶೇಷ |
| ಭೂರಿ | ೨೫—೮ | ಅಧಿಕ, ಬಹಳ |
| ಮಕುಟ | ೨೬—೧೪ | ಕಿರೀಟ |
| ಮತ್ತಕಾಶಿನಿ | ೮೮—೭೨ | ಮಾದಕ ಚೆಲುವಿನ ಹೆಣ್ಣು |
| ಮತ್ತೇಭ | ೭೨—೩೪ | ಮದ್ದಾನೆ |
| ಮುಂಗಲಿ | ೧೦೯—೪೧ | ಮುಂಗುಸಿ |
| ಮುಕ್ತಾ | ೨೬—೧೫ | ಮುತ್ತು |
| ಮುದ್ಗರ | ೧೪೧—೧೯ | ಗದೆ |
| ಮೌಳಿ | ೨೬—೧೨ | ತಲೆ |
| ಯುಗ್ಮ | ೬೦—೬೧ | ಜೋಡಿ, ಜೊತೆ |
| ರಜ | ೭೮—೧೨ | ಹುಡಿ |
| ರಾಗ | ೨೦—೨೫ | ಪ್ರೀತಿ |
| ರುಕ್ಮಗರ್ಭ | ೭೮—೧೫ | ಹೊಳೆಯುವ ಒಡಲು |
| ಲೋವೆ | ೯೩—೧೧೧ | ಮಂಟಪದ ಇಳಿಮಾಡು |
| ವಚಿಸದೆ | ೨೭—೨೦ | ಮಾತಾಡದೆ |
| ವಂದಿ | ೧೪೮—೨೬ | ಹೊಗಳುಭಟ್ಟ |
| ವಾಕು | ೨೫—೬ | ವಾಕ್ಕು, ಮಾತು |
| ವಾಂಛಲ್ಯ | ೧೦೯—೫೦ | ಪ್ರೀತಿ, ಅಕ್ಕರೆ |
| ವಾಯಸ | ೧೦೯—೪೪ | ಕಾಗೆ |
| ಶರವೇಧೆ | ೨೮—೨೬ | ಬಾಣದ ಪೆಟ್ಟಿನಿಂದಾದ ನೋವು |
| ಶಾಲಿ | ೯—೧೯ | ಬತ್ತದ ಗದ್ದೆ |
| ಶಿಖಾಮಣಿ | ೧೨—೩೯ | ತಲೆಯಲ್ಲಿರುವ ರತ್ನ |
| ಶ್ವಾನ | ೪೬—೩೦ | ನಾಯಿ |
| ಸರ್ಬ | ೧೬—೨೦ | ಸರ್ವ, ಎಲ್ಲ |
| ಸಾರಸ | ೭೦—೧೮, ೧೦೯—೪೫ | ಕಮಲ, ಕೊಕ್ಕರೆಹಕ್ಕಿ |
| ಸಾರಂಗ | ೧೦೮—೩೯ | ಗಂಡು ಚಿಗರೆ |
| ಸಿಂಗಾಡಿ | ೧೪೦—೧೫ | ಬಿಲ್ಲು |

| | | |
|---|---|---|
| ಸಿತಛತ್ರ | ೧೪೮—೨೬ | ಬೆಳ್ಗೊಡೆ |
| ಸೀಸಕ | ೧೪೦—೧೫ | ಶಿರಸ್ತ್ರಾಣ |
| ಸುಮನಸ | ೮—೧೧ | ನಿರ್ಮಲ ಮನಸ್ಸನ್ನು ಉಳ್ಳ |
| ಸುರಗಿ | ೧೪೧—೧೯ | ಸುರಿಗೆ, ಕಠಾರಿ |
| ಸುಷೇಣ | ೧೦೩—೯ | ೧) ವಾನರ ವೈದ್ಯ<br>೨) ಒಂದು ಬಗೆಯ ಮರ |
| ಸೂನು | ೫೮—೩ | ಮಗ |
| ಸ್ತ್ರೀ ಪಾಣಿಗಡಕ | ೯೮—೨೩ | ಹೆಣ್ಣಿನ ಕೈಯೊಳಗೆ ಸಿಕ್ಕವನು |
| ಸ್ಯಂದನ | ೧೩೪—೬೦ | ರಥ |
| ಹರಿ | ೭೭—೫ | ಸೂರ್ಯ |
| ಹಸರದಿ | ೮೩—೪೫ | ಹರಡಿಕೊಂಡು |
| ಹೊಂಮಿಂಪವು | ೩೭—೨೨ | ಸುಡುವುವು |
| ಹೋರಿಯಾಡು | ೨೫—೮ | ಹೋರಾಟ ಮಾಡು |
| ಹೃತ್ಕರ್ಣಿಕೆ | ೧೧—೨೯ | ಹೃದಯದ ಮಧ್ಯಭಾಗ |

# ತಪ್ಪೋಲೆ

| ತಪ್ಪುರೂಪ | ಸಾಧುರೂಪ | ಪುಟ—ಪದ್ಯ |
| --- | --- | --- |
| ತುಂಬಿಗ—ಳಿಂದಂಬುವಂ | ತುಂಬಿಗಳಿಂದಂಬುವಂ | ೭೮—೧೧ |
| ಕಿರಿಸಯೆಳು | ಕಿರಿಯೆಸಳು | ೮೪—೪೮ |
| ನಾರಾಣಾಖ್ಯ | ನಾರಾಯಣಾಖ್ಯ | ೮೬—೭೩ |
| ಗಜಮನೆ | ಗಜಗಮನೆ | ೮೬—೬೪ |
| ಮೋಡ ಮುಸುತಾಗ | ಮೋಡಮುಸುಕುತಾಗ | ೧೬೨—೫ |

# ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನ

ೞ೪, ೩ನೆಯ ಅಡ್ಡಬೀದಿ, ಗವೀಪುರಂ ವಿಸ್ತರಣ, ಬೆಂಗಳೂರು-೧೯

## ಪ್ರತಿಷ್ಠಾನದ ಪ್ರಕಟನೆಗಳು

೧. ಕೀರ್ತನ ಕುಸುಮಾಂಜಲಿ ರೂ. ೧೦-೦೦
(ನಾರಾಯಣದಾಸರ ಕೀರ್ತನೆಗಳು)

೨. ಮಣಿಹ ೫೦-೦೦
(ದಿ॥ ಫ. ಗು ಹಳಕಟ್ಟಿಯವರ ಸಂಸ್ಕರಣ ಸಂಪುಟ)

೩. ಬೇಂದ್ರೆ ಸ್ಮೃತಿ ೫-೦೦

೪. ಸರ್ವಜ್ಞ ವಚನಗಳು ೧೫-೦೦

೫. ಸೂತ ಭಾರತ ೧೫-೦೦

೬. ಧ್ರುವ ಚರಿತ್ರೆ ೧೫-೦೦
(ತಿಮ್ಮಪ್ಪ ದಾಸರ ಸಾಂಗತ್ಯ ಕೃತಿ)

೭. ಶ್ರೀ ಕೃಷ್ಣದೇವರಾಯನ ದಿನಚರಿ ೧೦-೦೦

೮. ಮೂರು ದತ್ತಿ ಉಪನ್ಯಾಸಗಳು ೧೦-೦೦

೯. ಹಸ್ತಪ್ರತಿ ಶಾಸ್ತ್ರ ೧೫-೦೦

## ಸಿದ್ಧತೆಯಲ್ಲಿ

೧. ತಿಮ್ಮಪ್ಪ ದಾಸರ "ಶ್ರೀ ಕೃಷ್ಣಬಾಲಲೀಲೆ"

೨. " "ಪರಬ್ರಹ್ಮ ಪ್ರಕಾಶಿಕ"

೩. ಜಾಯೇಂದ್ರನ "ರಸಮಂಜರಿ"

## ಮಾರಾಟಕ್ಕಿರುವ ಇತರ ಕೃತಿಗಳು

೧. ಪ್ರೊ॥ ಎಂ, ವಿ. ಸೀ. ಅವರ ಪುಸ್ತಕಗಳು (ನೆಟ್ಟಿಗೆ) ರೂ. ೨೦-೦೦
(ರಾಘವ ಪ್ರಕಾಶನದ ಕೊಡುಗೆ)

೨, ಕವಿ ಜಿಹ್ವಾಬಂಧನ ೨-೦೦
(ಶ್ರೀಮತಿ ಕೆ. ಶಾಂತಾ ಅವರ ಕೊಡುಗೆ)

೩, ಕೈಲಾಸಂ ಅವರ ಕೆಲವು ನಾಟಕಗಳು
(ಶ್ರೀ ಬಿ. ಎಸ್. ರಾಮರಾಯರ ಕೊಡುಗೆ)

೪. ಷೇಕ್ಸ್‌ಪಿಯರನ 'ಹನ್ನೆರಡನೆಯ ರಾತ್ರಿ' ೬-೦೦
(ಡಾ॥ ಪಿ. ವಿ. ನಾರಾಯಣ ಅವರ ಕೊಡುಗೆ)

೫. ಅಧ್ಯಯನ, (ಡಾ॥ ಶಂ.ಬಾ ಜೋಶಿ ಅಭಿನಂದನ ಗ್ರಂಥ: ೫೦-೦೦
ಅಭಿನಂದನ ಸಮಿತಿಯ ಕೊಡುಗೆ)

* ಪುಸ್ತಕ ವ್ಯಾಪಾರಿಗಳಿಗೆ ಧಾರಾಳವಾದ ಕಮಿಷನ್
* ಪ್ರತಿಗಳಿಗಾಗಿ ಪ್ರತಿಷ್ಠಾನದ ವಿಳಾಸಕ್ಕೆ ಬರೆಯಿರಿ,

ಕನ್ನಡದಲ್ಲಿ ಅಚ್ಚಾಗಿರುವ ಧ್ರುವಕಥೆ ದೊರೆಯುವುದು ಚಾಟು ವಿಟ್ಠಲನಾಥನ ಕನ್ನಡ ಭಾಗವತದಲ್ಲಿ ಮಾತ್ರ. ಅಲ್ಲಿ ಇರತಕ್ಕ ವಿಷ್ಣುಭಕ್ತರ ಕಥೆಗಳ ಜೊತೆಯಲ್ಲಿ ಧ್ರುವನ ಕಥೆಯೂ ಬರುತ್ತದೆ. ಅಲ್ಲಿ ಈ ಕಥೆ ತಕ್ಕಮಟ್ಟಿಗೆ ವಿಸ್ತಾರವಾಗಿಯೇ ನಿರೂಪಿತವಾಗಿದ್ದರೂ ತಿಮ್ಮಪ್ಪದಾಸರ ಕೃತಿಯಂತೆ ಅದು ತನಗೆ ತಾನೇ ಒಂದು ಪ್ರತ್ಯೇಕವಾದ ಕೃತಿಯಲ್ಲ, ಒಂದು ಕಿರು ಕಾವ್ಯಕೃತಿಯ ಪ್ರಮಾಣ ಅದಕ್ಕಿದೆಯಾದರೂ ಅಲ್ಲಿ ಬರುವ ಅನೇಕ ವಿಷ್ಣುಭಕ್ತರ ಕಥಾಮಾಲಿಕೆಯಲ್ಲಿ ಅದು ಒಂದು ಮಣಿ ಮಾತ್ರ. ಹಾಗೆಂದೇ ಕಥೆ ಅಲ್ಲಿ ಭರದಿಂದ ಓಡುತ್ತದೆ. ರಾಜ ರಾಣಿ ಪುರ ವನ ಕೇರಿಗಳ ವರ್ಣನೆಗಳಿಗ ಅಲ್ಲಿ ಅವಕಾಶವಿಲ್ಲ. ತಾನು ಮುಂದೆ ಇನ್ನೂ ಹಲವಾರು ಕಥೆಗಳನ್ನು ಹೇಳಬೇಕಾಗಿರುವುದರ ಅರಿವು ಕವಿಗಿರುವುದರಿಂದ ಕಥೆಯಷ್ಟನ್ನೇ ಸವೇಗವಾಗಿ ಹೇಳಿಕೊಂಡು ಹೋಗಿದ್ದಾನೆ. ತಿಮ್ಮಪ್ಪದಾಸರ ಕೃತಿಯು ಪ್ರಮಾಣದಲ್ಲಿ ಅದಕ್ಕಿಂತಲೂ ಹಿರಿದಾದದ್ದು. ಇದು ಇಪ್ಪತ್ತೆರಡು ಅಧ್ಯಾಯಗಳಿಂದ ಕೂಡಿ ಸುಮಾರು ಒಂಬೈನೂರು ಪದ್ಯಗಳವರೆಗೆ ಬೆಳೆದಿದೆ. ಕನ್ನಡ ಭಾಗವತದಲ್ಲಿನ ಧ್ರುವಕಥೆಯಾದರೋ ಐದು ಸಂಧಿಗಳದ್ದಾಗಿದ್ದು ಒಟ್ಟು ಇನ್ನೂರ ಐವತ್ತನಾಲ್ಕು ಪದ್ಯಗಳಿಗೆ ಮುಗಿಯುತ್ತದೆ. ಪದ್ಯಗಳ ಸಂಖ್ಯೆಯನ್ನು ಅಲಕ್ಷಿಸಿದರೂ ತಿಮ್ಮಪ್ಪದಾಸರ ಕೃತಿ ತನ್ನ ಸಾವಧಾನಗತಿಯಿಂದ ವಿವರಗಳ ಪೂರೈಕೆಯಿಂದ ಮತ್ತು ಸ್ವತಂತ್ರ ಕೃತಿಗೆ ಸಹಜವಾದ ದೀರ್ಘವರ್ಣನೆಗಳಿಂದ ಕೂಡಿ ಒಂದು ಸಮಗ್ರ ಕೃತಿಯ ಸ್ವರೂಪವನ್ನು ಪಡೆದುಕೊಂಡಿದೆ. ಕನ್ನಡದಲ್ಲಿ ಹೀಗೆ ಇಡಿಯಾಗಿ, ಇಷ್ಟು ದೀರ್ಘವಾಗಿ, ಒಂದು ಪ್ರತ್ಯೇಕ ಕೃತಿಯಾಗಿ ರಚಿತವಾಗಿರುವ ಧ್ರುವಕೃತಿ ಸದ್ಯಕ್ಕೆ ತಿಳಿದಂತೆ ಇದೊಂದೇ ಎಂದು ಹೇಳಬಹುದು.

—ಡಾ. ಎನ್. ಎಸ್. ಲಕ್ಷ್ಮೀನಾರಾಯಣಭಟ್ಟ